# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಜುಲೈ ೨, ೨೦೧೫ (ಆಷಾಢ ೧೧, ಶಕ ವರ್ಷ ೧೯೩೭)<br>Bengaluru, Thursday, July 2, 2015 (Ashadha 11, Shaka Varsha 1937) | ಸಂಚಿಕೆ ೨೭<br>Issue 27 |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಂದಾಯ ಸಚಿವಾಲಯ

**ವಿಷಯ :** ಶಿವಮೊಗ್ಗ ಜಿಲ್ಲೆಯಲ್ಲಿ ಕೃಷಿ ವಿಶ್ವವಿದ್ಯಾಲಯ ಸ್ಥಾಪಿಸಲು ಜಮೀನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1) ವಿಶೇಷಾಧಿಕಾರಿಗಳು ಕೃಷಿ ಮತ್ತು ತೋಟಗಾರಿಕೆ ವಿಶ್ವವಿದ್ಯಾಲಯ ಶಿವಮೊಗ್ಗ ರವರ ಮನವಿ ದಿನಾಂಕ: 10–07–2013 ಹಾಗೂ 02–12–2013

2) ಜಿಲ್ಲಾಧಿಕಾರಿ ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರ ಪತ್ರ ಸಂಖ್ಯೆ: ಎಲ್ಎನ್‌ಡಿ (2)ಸಿಆರ್ 223/13–14 (32159/13–14 ದಿ: 30–06–2014 ಮತ್ತು 15–10–2014.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮಸಂಖ್ಯೆ: (1) ರಲ್ಲಿ ವಿಶೇಷಾಧಿಕಾರಿಗಳು ಕೃಷಿ ಮತ್ತು ತೋಟಗಾರಿಕೆ ವಿಶ್ವವಿದ್ಯಾಲಯ ಶಿವಮೊಗ್ಗರವರು ಶಿವಮೊಗ್ಗದಲ್ಲಿ ಕೃಷಿ ಮತ್ತು ತೋಟಗಾರಿಕೆ ವಿಶ್ವವಿದ್ಯಾಲಯವನ್ನು ಸ್ಥಾಪಿಸಲು ಸುಮಾರು 1,500 ಎಕರೆ ಜಮೀನು ಬೇಕಾಗಿರುವುದರಿಂದ, ಶಿವಮೊಗ್ಗ ತಾಲ್ಲೂಕು, ನಿಧಿಗೆ ಹೋಬಳಿ, ಯರಗನಾಳು ಗ್ರಾಮದ ಸ.ನಂ.15,18,19,20,22,23,26,27,28,29,30,31,35,36 ರ ಜಮಿನುಗಳು ಹಾಗೂ ಶಿವಮೊಗ್ಗ ತಾಲ್ಲೂಕು, ಕಸಬಾ ಹೋಬಳಿ, ಅಗಸವಳ್ಳಿ ಗ್ರಾಮದ ಸ.ನಂ. 107 ರ ಜಮೀನುಗಳು ಸೇರಿ ಒಟ್ಟು 1,205=00 ಎಕರೆ ಜಮೀನನ್ನು ಮಂಜೂರು ಮಾಡಲು ಕೋರಿರುತ್ತಾರೆ.

ಆದರೆ ಸದರಿ ಜಮೀನನ್ನು ಮಂಜೂರು ಮಾಡುವಲ್ಲಿ ಬಗರ್‌ಹುಕುಂ ಸಾಗುವಳಿದಾರರ ಹಾಗೂ ನ್ಯಾಯಾಲಯ ಪ್ರಕರಣಗಳ ಅಭ್ಯಂತರ ಮತ್ತು ಅಡಚಣೆ ಇದ್ದುದರಿಂದ, ಇದರ ಬದಲು ಸಾಗರ ತಾಲ್ಲೂಕು, ಆನಂದಪುರ ಹೋಬಳಿ, ಇರುವಕ್ಕಿ ಗ್ರಾಮದ ಸ.ನಂ. 11,12,13,30,31,45ರಲ್ಲಿ ಹಾಗೂ ಎಬ್ಬೋಡಿ ಗ್ರಾಮದ ಸ.ನಂ. 13,14,48 ಮತ್ತು ಸರಗುಂದ ಗ್ರಾಮದ ಸ.ನಂ. 35 ಹಾಗೂ ಯಡೇಹಳ್ಳಿ ಗ್ರಾಮದ ಸ.ನಂ. 88 ರಲ್ಲಿ ಒಟ್ಟು 802 ಎಕರೆ 07 ಗುಂಟೆ ಲಭ್ಯವಿರುವ ಜಮೀನುಗಳನ್ನು ನೂತನ ಕೃಷಿ ಮತ್ತು ತೋಟಗಾರಿಕೆ ವಿಶ್ವವಿದ್ಯಾಲಯಕ್ಕೆ ಮಂಜೂರು ಮಾಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2) ರ ಪತ್ರಗಳಲ್ಲಿ ಜಿಲ್ಲಾಧಿಕಾರಿ ಶಿವಮೊಗ್ಗ ಜಿಲ್ಲೆ ರವರು ಸಾಗರ ತಾಲ್ಲೂಕು, ಆನಂದಪುರ ಹೋಬಳಿ ಇರುವಕ್ಕಿ ಗ್ರಾಮದ ಸ.ನಂ. 11 ರಲ್ಲಿ 24–05, ಸ.ನಂ. 12 ರಲ್ಲಿ 6–30, ಸ.ನಂ. 13 ರಲ್ಲಿ 160–00 ಎಕರೆ ಸ.ನಂ. 30 ರಲ್ಲಿ 80–00 ಎಕರೆ, ಸ.ನಂ. 31 ರಲ್ಲಿ 112–00 ಎಕರೆ ಸ.ನಂ.45 ರಲ್ಲಿ 151–00 ಎಕರೆ ಹಾಗೂ ಎಬ್ಬೋಡಿ ಗ್ರಾಮದ ಸ.ನಂ. 13 ರಲ್ಲಿ 11–28 ಎಕರೆ ಸ.ನಂ.14 ರಲ್ಲಿ 31–07 ಎಕರೆ ಸ.ನಂ. 48 ರಲ್ಲಿ 69–35 ಎಕರೆ ಹಾಗೂ ಸರಗುಂದ ಗ್ರಾಮದ ಸ.ನಂ. 35 ರಲ್ಲಿ 130–22 ಎಕರೆ ಮತ್ತು ಯಡೇಹಳ್ಳಿ ಗ್ರಾಮದ ಸ.ನಂ.88 ರಲ್ಲಿ 25–00 ಎಕರೆ ಒಟ್ಟು 802 ಎಕರೆ 07 ಗುಂಟೆ ಜಮೀನುಗಳು ದಾಖಲೆಗಳಂತೆ ಹುಲ್ಲುಬನ್ನಿ ಮತ್ತು ಸರ್ಕಾರದ ಮುಫತ್ತು ಜಮೀನುಗಳಾಗಿದ್ದು, ಪ್ರಸ್ತಾಪಿತ ಜಮೀನುಗಳಲ್ಲಿ ಕಾಡುಜಾತಿಯ ಮರಗಳಿದ್ದು, 802 ಎಕರೆ 7 ಎಕರೆ ಪೈಕಿ ಮನೆ ಹಾಗೂ ಒತ್ತುವರಿ ಇರುವ ಪ್ರದೇಶವನ್ನು ಮತ್ತು ಯಡೇಹಳ್ಳಿ ಗ್ರಾಮದ ಸ.ನಂ. 88 ರಲ್ಲಿ 25–00 ಎಕರೆ ಡೀಮ್ಡ್ ಫಾರೆಸ್ಟ್ ಭೂಮಿಯನ್ನು ಹೊರತು ಪಡಿಸಿ ಉಳಿದ 777 ಎಕರೆ 07 ಗುಂಟೆ ಜಮೀನನ್ನು ಕೃಷಿ ಮತ್ತು ತೋಟಗಾರಿಕೆ ವಿಶ್ವವಿದ್ಯಾಲಯ ಸ್ಥಾಪಿಸುವ ಉದ್ದೇಶಕ್ಕೆ ಕರ್ನಾಟಕ ಭೂ ಮಂಜೂರಾತಿ ನಿಯಮ–1969 ರ ನಿಯಮ 10(3) ರಡಿ ರಾಜ್ಯ ಸರ್ಕಾರದ ಶಾಸನ ಬದ್ಧ ಸಂಸ್ಥೆಯಾದ ಕೃಷಿ ಮತ್ತು ತೋಟಗಾರಿಕೆ ವಿಶ್ವವಿದ್ಯಾಲಯ, ಶಿವಮೊಗ್ಗ ರವರಿಗೆ ಕರ್ನಾಟಕ ಭೂ ಮಂಜೂರಾತಿ ನಿಯಮ 1969 ರ ನಿಯಮ 20(1) (ಸಿ) ಮೇರೆಗೆ ಜಮೀನನ್ನು ಎಕರೆಯೊಂದರ ಮಾರುಕಟ್ಟೆ ದರದ ಶೇಕಡಾ 50 ರಷ್ಟು ಮೌಲ್ಯವನ್ನು ಸರ್ಕಾರಕ್ಕೆ ಭರಿಸುವ ಹಾಗೂ ಪ್ರಸ್ತಾಪಿತ ಪ್ರದೇಶದಲ್ಲಿನ ಬೆಲಬಾಳುವ ಮರಗಳನ್ನು (ಇಲಾಖಾ ನಿಯಮಗಳಂತೆ) ಸಂರಕ್ಷಿಸುವ ಹಾಗೂ ಮರಗಳ ಮೇಲೆ ಯಾವುದೇ ಹಕ್ಕುಗಳನ್ನು ಸ್ಥಾಪಿಸದಂತೆ ಷರತ್ತಿಗೊಳಪಡಿಸಿ ಭೂ ಮಂಜೂರಾತಿ ಮಾಡುವ ಬಗ್ಗೆ ಶಿಫಾರಸ್ಸು ಮಾಡಿರುತ್ತಾರೆ.

**ಮೇಲಿನ ಅಂಶಗಳ ಹಿನ್ನಲೆಯಲ್ಲಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.**

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 40 ಎಲ್.ಜಿ.ಎಸ್ 2012 ಬೆಂಗಳೂರು ದಿನಾಂಕ: 31-01-2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಸಾಗರ ತಾಲ್ಲೂಕು, ಆನಂದಪುರ ಹೋಬಳಿ ಇರುವಕ್ಕಿ ಗ್ರಾಮದ ಸ.ನಂ. 11 ರಲ್ಲಿ 24–05, ಸ.ನಂ.12 ರಲ್ಲಿ 6–30, ಸ.ನಂ. 13 ರಲ್ಲಿ 160–00 ಎಕರೆ ಸ.ನಂ.30 ರಲ್ಲಿ 80–00 ಎಕರೆ, ಸ.ನಂ. 31 ರಲ್ಲಿ 112–00 ಎಕರೆ ಸ.ನಂ. 45 ರಲ್ಲಿ 151–00 ಎಕರೆ ಮತ್ತು ಎಬ್ಬೋಡಿ ಗ್ರಾಮದ ಸ.ನಂ. 13 ರಲ್ಲಿ 11–28 ಎಕರೆ ಸ.ನಂ. 14 ರಲ್ಲಿ 31–07 ಎಕರೆ ಸ.ನಂ.48 ರಲ್ಲಿ 69–35 ಎಕರೆ ಹಾಗೂ ಸರಗುಂದ ಗ್ರಾಮದ ಸ.ನಂ.35 ರಲ್ಲಿ 130–22 ಎಕರೆ ಮತ್ತು ಸರಗುಂದ ಗ್ರಾಮದ ಸ.ನಂ.35 ರಲ್ಲಿ 130–22 ಎಕರೆ ಹಾಗೂ ಯಡೇಹಳ್ಳಿ ಗ್ರಾಮದ ಸ.ನಂ.88 ರಲ್ಲಿ 25–00 ಎಕರೆ ಒಟ್ಟು 802 ಎಕರೆ 07 ಗುಂಟೆ ಎಕರೆ ಪೈಕಿ ಮನೆ ಹಾಗೂ ಒತ್ತುವರಿ ಇರುವ ಪ್ರದೇಶವನ್ನು ಮತ್ತು ಯಡೇಹಳ್ಳಿ ಗ್ರಾಮದ ಸ.ನಂ. 88 ರಲ್ಲಿ 25–00 ಎಕರೆ ಡೀಮ್ಡ್ ಫಾರೆಸ್ಟ್ ಭೂಮಿಯನ್ನು ಹೊರತು ಪಡಿಸಿ, ಉಳಿದ 777 ಎಕರೆ 07 ಗುಂಟೆ ಜಮೀನನ್ನು ಕೃಷಿ ಮತ್ತು ತೋಟಗಾರಿಕೆ ವಿಶ್ವವಿದ್ಯಾಲಯ ಸ್ಥಾಪಿಸುವ ಉದ್ದೇಶಕ್ಕೆ ಕರ್ನಾಟಕ ಭೂ ಮಂಜೂರಾತಿ ನಿಯಮ–1969 ರ ನಿಯಮ 10(3) ರಡಿ ರಾಜ್ಯ ಸರ್ಕಾರದ ಶಾಸನ ಬದ್ಧ ಸಂಸ್ಥೆಯಾದ ಕೃಷಿ ಮತ್ತು ತೋಟಗಾರಿಕೆ ವಿಶ್ವವಿದ್ಯಾಲಯ, ಶಿವಮೊಗ್ಗರವರಿಗೆ ಕರ್ನಾಟಕ ಭೂ ಮಂಜೂರಾತಿ ನಿಯಮ 1969 ರ ನಿಯಮ 20(1) (ಸಿ) ಮೇರೆಗೆ ಜಮೀನನ್ನು ಎಕರೆಯೊಂದಕ್ಕೆ ಪ್ರಚಲಿತ ಮಾರುಕಟ್ಟೆ ದರದ ಶೇಕಡಾ 50 ರಷ್ಟು ಮೌಲ್ಯವನ್ನು ವಿಧಿಸಿ, ಮತ್ತು ಗೋಮಾಳ ಜಮೀನನ್ನು 97(4) ರನ್ವಯ ತಗ್ಗಿಸಿ ಹಾಗೂ ಖರಾಬು ಜಮೀನಿಗೆ ಸಂಬಂಧಿಸಿದಂತೆ, ಕರ್ನಾಟಕ ಭೂ ಕಂದಾಯ ಕಾಯ್ದೆ 1964 ರ ಕಲಂ 68(1) ಮತ್ತು 68(5) ರಡಿ ಸಾರ್ವಜನಿಕ ಹಕ್ಕಿನಿಂದ ವಿಹಿತಗೊಳಿಸುವುದರಿಂದ ವಿನಾಯಿತಿ ನೀಡಿ, ಈ ಕೆಳಗಿನ ಷರತ್ತು ಮತ್ತು ನಿಬಂಧನೆಗಳನ್ವಯ ಮಂಜೂರು ಮಾಡಿದೆ.

**ಷರತ್ತುಗಳು:**

1. ಪ್ರಸ್ತಾಪಿತ ಪ್ರದೇಶದಲ್ಲಿನ ಬೆಲೆ ಬಾಳುವ ಮರಗಳನ್ನು (ಇಲಾಖಾ ನಿಯಮಗಳಂತೆ) ಸಂರಕ್ಷಿಸುವ ಹಾಗೂ ಮರಗಳ ಮೇಲೆ ಯಾವುದೇ ಹಕ್ಕುಗಳನ್ನು ಸ್ಥಾಪಿಸದಂತೆ.
2. ಮಂಜೂರಾದ ಜಮೀನನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸತಕ್ಕದ್ದು.
3. ಮಂಜೂರಾದ ಭೂಮಿಯನ್ನು ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಬಳಸತಕ್ಕದ್ದಲ್ಲ.
4. ಮಂಜೂರಾದ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ಕ್ರಮವಹಿಸತಕ್ಕದ್ದು.
5. ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
6. ಮಂಜೂರಾದ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಮಾರಾಟ ಮಾಡುವುದಾಗಲೀ, ಗುತ್ತಿಗೆ/ಉಪಗುತ್ತಿಗೆಗೆ ನೀಡುವುದಾಗಲೀ, ಅಡಮಾನ, ವರ್ಗಾವಣೆ, ದಾನ, ಇತರೆ ಯಾವುದೇ ರೀತಿಯ ಪರಭಾರೆಯನ್ನು ಮಾಡಬಾರದು.
7. ಮಂಜೂರಾದ ಜಮೀನಿನ ಯಾವುದೇ ಭಾಗವು ಸಾರ್ವಜನಿಕ ಉದ್ದೇಶಕ್ಕೆ ಅಗತ್ಯವಾಗಿದ್ದಲ್ಲಿ, ಸರ್ಕಾರವು ಸದರಿ ಜಮೀನನ್ನು ಪರಿಹಾರ ನೀಡದೇ ಹಿಂತೆಗೆದುಕೊಳ್ಳುವ ಹಕ್ಕನ್ನು ಹೊಂದಿರುತ್ತದೆ.
8. ಮಂಜೂರಾದ ಜಮೀನು ಸಂಸ್ಥೆಗೆ ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.
9. ಮಂಜೂರಾದ ಜಮೀನಿನಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರವಾನಗಿಗಳನ್ನು ಸಂಬಂಧಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು ಹಾಗೂ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ರೀತಿಯ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.
10. ಮಂಜೂರಾದ ಜಮೀನು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ ಈ ಮಂಜೂರಾತಿ ಆದೇಶ ತನ್ನಷ್ಟಕ್ಕೆ ತಾನೇ ರದ್ದಾಗುವುದು ಹಾಗೂ ಯಾವುದೇ ಪರಿಹಾರ ನೀಡದೇ ಮಂಜೂರಾದ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗುವುದು.
11. ಜಿಲ್ಲಾಧಿಕಾರಿಗಳು ಮಂಜೂರಾದ ಜಮೀನನ್ನು ಫಲಾನುಭವಿಗಳಿಗೆ ಹಸ್ತಾಂತರಿಸುವಾಗ ಮಂಜೂರಾದ ಪ್ರದೇಶದ ವಾಸ್ತವ ಪರಿಸ್ಥಿತಿಗಳನ್ನು ಗಮನದಲ್ಲಿಟ್ಟುಕೊಂಡು ಪೂರಕವಾದ ಷರತ್ತುಗಳನ್ನು ವಿಧಿಸಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಉಮಾದೇವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಮಂಜೂರಾತಿ–1)

**PR-220**

**SC-25**

## ಕಂದಾಯ ಸಚಿವಾಲಯ

**ವಿಷಯ :** ಬೆಂಗಳೂರು ದಕ್ಷಿಣ ತಾಲ್ಲೂಕು, ತಾವರೆಕೆರೆ ಹೋಬಳಿ, ಚುಂಚನಗುಪ್ಪೆ ಗ್ರಾಮದ ಸ.ನಂ.43 ರಲ್ಲಿ 15–00 ಎಕರೆ ಜಮೀನನ್ನು ಕರ್ನಾಟಕ ರಾಜ್ಯ ಆದಿಜಾಂಬವ ಸಂಘದ ನಿವೇಶನರಹಿತ ಚರ್ಮೋದ್ಯೋಗ ಮತ್ತು ಸಫಾಯಿ ಕರ್ಮಚಾರಿಗಳಿಗೆ ವಸತಿ ಸೌಕರ್ಯ ಒದಗಿಸುವ ಸಲುವಾಗಿ ರಾಜೀವ್‌ಗಾಂಧಿ ಗ್ರಾಮೀಣ ವಸತಿ ನಿಗಮಕ್ಕೆ ಹಸ್ತಾಂತರಿಸುವ ಕುರಿತು.

**ಓದಲಾಗಿದೆ:** 1) ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ರವರ ಪತ್ರ ಸಂಖ್ಯೆ: ಎಲ್ಎನ್‌ಡಿ(ಎಸ್):ಸಿ.ಆರ್602/2009-10 ದಿನಾಂಕ: 13-02-2012

2) ವ್ಯವಸ್ಥಾಪಕ ನಿರ್ದೇಶಕರು, ರಾಜೀವ್‌ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತ, ರವರ ಪತ್ರ ಸಂಖ್ಯೆ: RGRHCL 12 MIS 898 2000 ದಿನಾಂಕ: 10-10-2012

**ಪ್ರಸ್ತಾವನೆ:-**

ಮೇಲೆ ಓದಲಾದ ಉಲ್ಲೇಖ(1)ರ ಪತ್ರದಲ್ಲಿ ಜಿಲ್ಲಾಧಿಕಾರಿ, ಬೆಂಗಳೂರು ನಗರ ಜಿಲ್ಲೆ ರವರು ಕರ್ನಾಟಕ ರಾಜ್ಯ ಆದಿಜಾಂಬವ ಸಂಘವು ನಿವೇಶನರಹಿತ ಚರ್ಮೋದ್ಯೋಗ ಮತ್ತು ಸಫಾಯಿ ಕರ್ಮಚಾರಿಗಳಿಗೆ ವಸತಿ ಸೌಕರ್ಯ ಒದಗಿಸುವ ಸಲುವಾಗಿ ಬೆಂಗಳೂರು ದಕ್ಷಿಣ ತಾಲ್ಲೂಕು, ತಾವರೆಕೆರೆ ಹೋಬಳಿ, ಚುಂಚನಗುಪ್ಪೆ ಗ್ರಾಮದ ಸ.ನಂ.43 ರಲ್ಲಿ 50-00 ಎಕರೆ ಜಮೀನನ್ನು ಕೋರಿರುವುದಾಗಿ ವರದಿ ಮಾಡಿರುತ್ತಾರೆ. ಸದರಿ ಸ.ನಂ. 43 ಸರ್ಕಾರಿ ಗೋಮಾಳ ಜಮೀನಾಗಿದ್ದು, ಒಟ್ಟು ವಿಸ್ತೀರ್ಣ 242-35 ಎ/ಗುಂ. ಪೈಕಿ 185-35 ಎ/ಗುಂ. ಜಮೀನನ್ನು ವಿಲೇ ಮಾಡಲಾಗಿದ್ದು, ಈ ಪೈಕಿ ಬ್ಲಾಕ್ ನಂ.94 ರಲ್ಲಿ ಲಭ್ಯವಿರುವ 15-00 ಎಕರೆ ಬೆಟ್ಟಗುಡ್ಡಗಳಿಂದ ಕೂಡಿದ ಜಮೀನನ್ನು ರಾಜೀವ್‌ಗಾಂಧಿ ಗ್ರಾಮೀಣ ವಸತಿ ನಿಗಮಕ್ಕೆ ಹಸ್ತಾಂತರಿಸುವ ಕುರಿತು ಜಿಲ್ಲಾಧಿಕಾರಿಗಳು, ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಉಲ್ಲೇಖ(1)ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು ಫಲಾನುಭವಿಗಳನ್ನು ಗುರುತಿಸಿ, ಫಲಾನುಭವಿಗಳ ಪಟ್ಟಿಯನ್ನು ಒದಗಿಸಿ, ಜಮೀನನ್ನು ರಾಜೀವ್‌ಗಾಂಧಿ ಗ್ರಾಮೀಣ ವಸತಿ ನಿಗಮಕ್ಕೆ ಹಸ್ತಾಂತರಿಸಿದಲ್ಲಿ, ನಿಗಮವು ಅದನ್ನು ಅಭಿವೃದ್ಧಿ ಪಡಿಸಿ, ಘಟಕ ವೆಚ್ಚವನ್ನು ಪಾವತಿಸಿಕೊಂಡು, ಸಂಘದ ಸದಸ್ಯರಿಗೆ ವಸತಿ ಸೌಕರ್ಯವನ್ನು ಒದಗಿಸಲಾಗುವುದೆಂದು ತಿಳಿಸಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 155 ಎಲ್‌ಜಿಬಿ 2012 ಬೆಂಗಳೂರು ದಿನಾಂಕ: -11-2014**

ಕರ್ನಾಟಕ ರಾಜ್ಯ ಆದಿಜಾಂಬವ ಸಂಘದ ನಿವೇಶನರಹಿತ ಚರ್ಮೋದ್ಯೋಗ ಮತ್ತು ಸಫಾಯಿ ಕರ್ಮಚಾರಿಗಳಿಗೆ ವಾಜಪೇಯಿ ವಸತಿ ಅಭಿವೃದ್ಧಿ ಯೋಜನೆಯಡಿ ವಸತಿ ಸೌಕರ್ಯ ಒದಗಿಸುವ ಸಲುವಾಗಿ ಬೆಂಗಳೂರು ದಕ್ಷಿಣ ತಾಲ್ಲೂಕು, ತಾವರೆಗೆರೆ ಹೋಬಳಿ, ಚುಂಚನಗುಪ್ಪೆ ಗ್ರಾಮದ ಸ.ನಂ.43ರ ಬ್ಲಾಕ್ ನಂ.94ರಲ್ಲಿ 15-00 ಎಕರೆ ಜಮೀನನ್ನು ರಾಜೀವ್‌ಗಾಂಧಿ ಗ್ರಾಮೀಣ ವಸತಿ ನಿಗಮಕ್ಕೆ ಹಸ್ತಾಂತರಿಸಲು ಸರ್ಕಾರದ ಅನುಮೋದನೆ ನೀಡಲಾಗಿದೆ. ಜಿಲ್ಲಾಧಿಕಾರಿಗಳು ಮಾರ್ಗಸೂಚಿಗಳನ್ವಯ ಫಲಾನುಭವಿಗಳನ್ನು ಗುರುತಿಸಿ, ಅಂತಹ ಫಲಾನುಭವಿಗಳ ಪಟ್ಟಿಯನ್ನು ಮುಂಚಿತವಾಗಿಯೇ ರಾಜೀವ್‌ಗಾಂಧಿ ಗ್ರಾಮೀಣ ವಸತಿ ನಿಗಮಕ್ಕೆ ಹಸ್ತಾಂತರಿಸಲು ಸೂಚಿಸಿದೆ.

**ಷರತ್ತುಗಳು:**

1. ಮಂಜೂರಾದ ಜಮೀನನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸತಕ್ಕದ್ದು.
2. ಮಂಜೂರಾದ ಭೂಮಿಯನ್ನು ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಬಳಸತಕ್ಕದ್ದಲ್ಲ.
3. ಮಂಜೂರಾದ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ಕ್ರಮವಹಿಸತಕ್ಕದ್ದು.
4. ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
5. ಮಂಜೂರಾದ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಮಾರಾಟ ಮಾಡುವುದಾಗಲೀ, ಗುತ್ತಿಗೆ/ಉಪಗುತ್ತಿಗೆಗೆ ನೀಡುವುದಾಗಲೀ, ಅಡಮಾನ, ವರ್ಗಾವಣೆ, ದಾನ, ಇತರೆ ಯಾವುದೇ ರೀತಿಯ ಪರಭಾರೆಯನ್ನು ಮಾಡಬಾರದು.
6. ಮಂಜೂರಾದ ಜಮೀನಿನ ಯಾವುದೇ ಭಾಗವು ಸಾರ್ವಜನಿಕ ಉದ್ದೇಶಕ್ಕೆ ಅಗತ್ಯವಾಗಿದ್ದಲ್ಲಿ, ಸರ್ಕಾರವು ಸದರಿ ಜಮೀನನ್ನು ಪರಿಹಾರ ನೀಡದೇ ಹಿಂತೆಗೆದುಕೊಳ್ಳುವ ಹಕ್ಕನ್ನು ಹೊಂದಿರುತ್ತದೆ.
7. ಮಂಜೂರಾದ ಜಮೀನು ಸಂಸ್ಥೆಗೆ ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.
8. ಮಂಜೂರಾದ ಜಮೀನಿನಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರವಾನಗಿಗಳನ್ನು ಸಂಬಂಧಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು ಹಾಗೂ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ರೀತಿಯ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.
9. ಮಂಜೂರಾದ ಜಮೀನು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ ಈ ಮಂಜೂರಾತಿ ಆದೇಶ ತನ್ನಷ್ಟಕ್ಕೆ ತಾನೇ ರದ್ದಾಗುವುದು ಹಾಗೂ ಯಾವುದೇ ಪರಿಹಾರ ನೀಡದೇ ಮಂಜೂರಾದ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗುವುದು.
10. ಜಿಲ್ಲಾಧಿಕಾರಿಗಳು ಮಂಜೂರಾದ ಜಮೀನನ್ನು ಫಲಾನುಭವಿಗಳಿಗೆ ಹಸ್ತಾಂತರಿಸುವಾಗ ಮಂಜೂರಾದ ಪ್ರದೇಶದ ವಾಸ್ತವ ಪರಿಸ್ಥಿತಿಗಳನ್ನು ಗಮನದಲ್ಲಿಟ್ಟುಕೊಂಡು ಪೂರಕವಾದ ಷರತ್ತುಗಳನ್ನು ವಿಧಿಸಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಉಮಾದೇವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಮಂಜೂರಾತಿ-1)

PR-219

SC-25

## ಕಂದಾಯ ಸಚಿವಾಲಯ

**ವಿಷಯ :** ಚಿಕ್ಕಬಳ್ಳಾಪುರ ಜಿಲ್ಲೆ, ಶಿಡ್ಲಘಟ್ಟ ತಾಲ್ಲೂಕು, ಜಂಗಮಕೋಟೆ ಹೋಬಳಿ, ಸುಂಡ್ರಹಳ್ಳಿ ಗ್ರಾಮದ ಸ.ನಂ.1 ರಲ್ಲಿ 24–00 ಎಕರೆ ಜಮೀನನ್ನು ಇಂಡೋ ಟಿಬೇಟಿಯನ್ ಬಾರ್ಟರ್ ಪೊಲೀಸ್ ಇಲಾಖೆಗೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1) ಜಿಲ್ಲಾಧಿಕಾರಿ, ಚಿಕ್ಕಬಳ್ಳಾಪುರ ಜಿಲ್ಲೆ ಇವರ ಪತ್ರ ಸಂಖ್ಯೆ: ಎಲ್‌ಎನ್‌ಡಿಸಿ.ಆರ್/144/2012–13 ದಿನಾಂಕ: 22–10–2013.
2) ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ ಇವರ ಪತ್ರ ಸಂಖ್ಯೆ: ಎಲ್‌ಎನ್‌ಡಿ/ಸಿಆರ್/313/12–13 ದಿನಾಂಕ: 13–11–2013.
3) ಇನ್ಸ್‌ಪೆಕ್ಟರ್ ಜನರಲ್, ಐ.ಟಿ.ಬಿ. ಪೊಲೀಸ್ ಇವರ ಮನವಿ ದಿನಾಂಕ: 23–08–2014.
4) ಡೆಪ್ಯುಟಿ ಇನ್ಸ್‌ಪೆಕ್ಟರ್ ಜನರಲ್, ಸೆಕ್ಟರ್ ಹೆಡ್ ಕ್ವಾಟರ್, ಐ.ಟಿ.ಬಿ.ಪಿ ಇವರ ಕಛೇರಿ ಪತ್ರ ದಿನಾಂಕ: 25–07–2012

**ಪ್ರಸ್ತಾವನೆ:–**

ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ ಇವರ ಉಲ್ಲೇಖ (1)ರ ಪತ್ರದಲ್ಲಿ ಚಿಕ್ಕಬಳ್ಳಾಪುರ ಜಿಲ್ಲೆ, ಶಿಡ್ಲಘಟ್ಟ ತಾಲ್ಲೂಕು, ಜಂಗಮಕೋಟೆ ಹೋಬಳಿ, ಸುಂಡ್ರಹಳ್ಳಿ ಗ್ರಾಮದ ಸ.ನಂ.1 ರಲ್ಲಿ ಈ ಹಿಂದೆ ಅರಣ್ಯ ಇಲಾಖೆಗೆ ವರ್ಗಾಹಿಸಲಾಗಿದ್ದ ಪೂರ್ಣ ಜಮೀನನ್ನು ಸರ್ಕಾರದ ಸುತ್ತೋಲೆ ಸಂ.ಆರ್‌ಡಿ 106 ಎಲ್‌ಜಿಪಿ 88 ದಿನಾಂಕ: 17–09–1991 ರಂತೆ ಈ ಜಮಿನನ್ನು ಕಂದಾಯ ಇಲಾಖೆಗೆ ಈಗಾಗಲೇ ಪಡೆಯಲಾಗಿರುತ್ತದೆ. ಇಂಡೋ ಟಿಬೇಟಿಯನ್ ಬಾರ್ಡರ್ ಪೊಲೀಸ್ ಇಲಾಖೆಗೆ ಜಮೀನು ಹಸ್ತಾಂತರಿಸುವುದರಿಂದ ರಾಜ್ಯದ ಭದ್ರತೆ ಹಾಗೂ ತುರ್ತು ಕಾರ್ಯಗಳಿಗೆ ಅನುಕೂಲವಾಗುತ್ತದೆಂದು ಸುಂಡ್ರಹಳ್ಳಿ ಗ್ರಾಮದ ಸ.ನಂ.1 ರಲ್ಲಿರುವ 24–00 ಎಕರೆ ಜಮೀನನ್ನು ಇಂಡೋ ಟಿಬೇಟಿಯನ್ ಬಾರ್ಡರ್ ಪೊಲೀಸ್ ಇಲಾಖೆಗೆ ಕಾಯ್ದಿರಿಸಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಉಲ್ಲೇಖ (2) ರಲ್ಲಿ ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ ಇವರು ಸುಂಡ್ರಹಳ್ಳಿ ಗ್ರಾಮದ ಸ.ನಂ.1 ರಲ್ಲಿ ಒಟ್ಟು 141–22 ಎಕರೆ/ಗುಂಟೆ ಗೋಮಾಳ ಜಮೀನಿದ್ದು, ಸದರಿ ಸವೆ ನಂಬರಿನಲ್ಲಿ ಸಕ್ರಮೀಕರಣ ಕೋರಿ ನಮೂನೆ 50 ಮತ್ತು 53 ರಲ್ಲಿ ಸಲ್ಲಿಸಲಾಗಿರುವ ಎಲ್ಲಾ ಅರ್ಜಿಗಳು ಇತ್ಯರ್ಥವಾಗಿರುತ್ತವೆ. ಹಾಗೂ ಗ್ರಾಮದಲ್ಲಿನ ರಾಸುಗಳ ಅಗತ್ಯಕ್ಕಿಂತ ಹೆಚ್ಚು ಗೋಮಾಳವಿರುತ್ತದೆ. ಪ್ರಸ್ತುತ ಈ ಜಮೀನು ಕಂದಾಯ ಇಲಾಖೆಗೆ ಸೇರಿದ್ದು ಇಂಡೋ ಟಿಬೇಟಿಯನ್ ಬಾರ್ಡರ್ ಪೊಲೀಸ್ ಇಲಾಖೆಗೆ ಜಮೀನು ಸೂಕ್ತವಾಗಿರುತ್ತದೆಂದು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಉಲ್ಲೇಖ (3) ರಲ್ಲಿ ಇನ್ಸ್‌ಪೆಕ್ಟರ್ ಜನರಲ್, ಐ.ಟಿ.ಬಿ.ಪಿ. ಇವರು ಮನವಿ ಸಲ್ಲಿಸಿ ದೊಡ್ಡಬಳ್ಳಾಪುರ ತಾಲ್ಲೂಕು, ತೂಬಗೆರೆ ಹೋಬಳಿ, ಮೇಲಿನನಾಯಕರಂಡಹಳ್ಳಿ ಗ್ರಾಮದ ಸ.ನಂ.15ಪಿ1 ರಲ್ಲಿ ಇಂಡೋ ಟಿಬೇಟಿಯನ್ ಬಾರ್ಡರ್ ಪೊಲೀಸ್‌ಗೆ ಜಮೀನು ಮಂಜೂರು ಮಾಡುವಂತೆ ಕೋರಿರುತ್ತಾರೆ. ಈ ಸಂಬಂಧ ದಿನಾಂಕ: 20–08–2014 ರಂದು ಮುಖ್ಯ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ ಇವರ ಅಧ್ಯಕ್ಷತೆಯಲ್ಲಿ ಸಭೆ ನಡೆದು ಪ್ರಸ್ತಾವನೆ ತಿರಸ್ಕೃತಗೊಂಡಿರುವುದರಿಂದ ಮೇಲೆ ಓದಲಾದ ಉಲ್ಲೇಖ (4) ರಲ್ಲಿ ಈಗಾಗಲೇ ಗುರುತಿಸಿರುವಂತೆ ಚಿಕ್ಕಬಳ್ಳಾಪುರ ಜಿಲ್ಲೆ, ಶಿಡ್ಲಘಟ್ಟ ತಾಲ್ಲೂಕು, ಜಂಗಮಕೋಟೆ ಹೋಬಳಿ, ಸುಂಡ್ರಹಳ್ಳಿ ಗ್ರಾಮದ ಸ.ನಂ.1 ರಲ್ಲಿ 24–00 ಎಕರೆ ಜಮೀನನ್ನು ಇಂಡೋ ಟಿಬೇಟಿಯನ್ ಬಾರ್ಡರ್ ಪೊಲೀಸ್ ಫೋರ್ಸ್ ಸ್ಥಾಪಿಸಲು ಮಂಜೂರು ಮಾಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 128 ಎಲ್‌ಜಿಕೆ 2013, ಬೆಂಗಳೂರು ದಿನಾಂಕ: 31–01–2015**

ಪ್ರಸ್ತಾವನೆಯಲ್ಲಿ ವಿರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಚಿಕ್ಕಬಳ್ಳಾಪುರ ಜಿಲ್ಲೆ, ಶಿಡ್ಲಘಟ್ಟ ತಾಲ್ಲೂಕು, ಜಂಗಮಕೋಟೆ ಹೋಬಳಿ, ಸುಂಡ್ರಹಳ್ಳಿ ಗ್ರಾಮದ ಸ.ನಂ.1 ರಲ್ಲಿ 24–00 ಎಕರೆ ಗೋಮಾಳ ಜಮೀನನ್ನು ಇಂಡೋ ಟಿಬೇಟಿಯನ್ ಬಾರ್ಡರ್ ಪೊಲೀಸ್ ಪೋರ್ಸ್‌ಗೆ ಕರ್ನಾಟಕ ಭೂಕಂದಾಯ ಕಾಯ್ದೆ, 1964ರ ಕಲಂ 71 ರಂತೆ ಕಾಯ್ದಿರಿಸಿ ಒಳಾಡಳಿತ ಇಲಾಖೆಗೆ ವರ್ಗಾಯಿಸಲು ಅನುಮೋದನೆ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

PR-218
SC-50

**ಉಮಾದೇವಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂಮಂಜೂರಾತಿ–1)

## ಕಂದಾಯ ಸಚಿವಾಲಯ

**ವಿಷಯ :** ಮುಳಬಾಗಿಲು ತಾಲ್ಲೂಕು, ಕಸಬಾ ಹೋಬಳಿ, ಮುಳಬಾಗಿಲು ಪಟ್ಟಣದ ಲೂರ್ದು ಇಂಗ್ಲೀಷ್ ಪ್ರೈಮರಿ ಶಾಲೆಗೆ 2–00 ಎಕರೆ ಜಮಿನಿನ ಗುತ್ತಿಗೆ ಮಂಜೂರಾತಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** 1) ಮುಖ್ಯೋಪಾಧ್ಯಾಯರು ಲೂರ್ದು ಇಂಗ್ಲೀಷ್ ಪ್ರೈಮರಿ ಶಾಲೆ ಮುಳಬಾಗಿಲು ಕೋಲಾರ ಜಿಲ್ಲೆ ಇವರ ಮನವಿ ದಿನಾಂಕ: 07–08–2002

2) ಜಿಲ್ಲಾಧಿಕಾರಿಗಳು ಕೋಲಾರ ಜಿಲ್ಲೆ, ಕೋಲಾರ ಇವರ ಪತ್ರ ಸಂಖ್ಯೆ: ಎಲ್‌ಎನ್‌ಡಿ/ಸಿಆರ್/28/11–12 ದಿ: 12–08–2011.

3) ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ ಬೆಂಗಳೂರು ರವರ ಪತ್ರ ಸಂಖ್ಯೆ:ಎಲ್‌ಎನ್‌ಡಿ/ಸಿಆರ್/85/2011–12 ದಿ: 16–09–2011.

4) ಜಿಲ್ಲಾಧಿಕಾರಿಗಳು ಕೋಲಾರ ಜಿಲ್ಲೆ, ಕೋಲಾರ ಇವರ ಪತ್ರ ಸಂಖ್ಯೆ: ಎಲ್‌ಎನ್‌ಡಿ/ಸಿಆರ್/28/11–12 ದಿ: 05–04–2012, 12–12–2012, 19–02–2014 ಮತ್ತು 15–09–2014

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ: (1) ರಲ್ಲಿ ಮುಖ್ಯೋಪಾಧ್ಯಾಯರು ಲೂರ್ದು ಇಂಗ್ಲೀಷ್ ಪ್ರೈಮರಿ ಶಾಲೆ ಮುಳಬಾಗಿಲು ಇವರು ಪ್ರಸ್ತಾಪಿತ ಶಾಲೆಗೆ ಮುಳಬಾಗಿಲು ತಾಲ್ಲೂಕು, ಕಸಬಾ ಹೋಬಳಿ, ಮುಳಬಾಗಿಲು ಪಟ್ಟಣದ ಸರ್ವೆ ನಂ. 58 ರಲ್ಲಿ 2–00 ಎಕರೆ ಜಮೀನಿನ ಗುತ್ತಿಗೆ ಮಂಜೂರಾತಿ ಅವಧಿಯನ್ನು ವಿಸ್ತರಿಸುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ: 2 ಮತ್ತು 3 ರಲ್ಲಿ ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ ಬೆಂಗಳೂರು ರವರು ಮತ್ತು ಜಿಲ್ಲಾಧಿಕಾರಿ ಕೋಲಾರ ಜಿಲ್ಲೆರವರು ಸಲ್ಲಿಸಿರುವ ವರದಿಯಲ್ಲಿ ಆದೇಶ ಸಂಖ್ಯೆ: ಪಿಐಎನ್/133/89–90 ದಿ: 17–08–1989 ಹಾಗೂ ಎಲ್‌ಎನ್/ಸಿಆರ್/88/71–72 ದಿನಾಂಕ: 17–05–1973 ರ ಪ್ರಕಾರ ಮುಳಬಾಗಿಲು ಸ.ನಂ. 58 ಪೈಕಿ 2–00 ಎಕರೆ ಪ್ರದೇಶವು ಲೂರ್ದು ಇಂಗ್ಲೀಷ್ ಹೈಯರ್ ಪ್ರೈಮರಿ ಶಾಲೆ ಮುಳಬಾಗಿಲು ರವರಿಗೆ 30 ವರ್ಷಗಳ ಗುತ್ತಿಗೆಗೆ ನೀಡಿದ್ದು, ಸದರಿ ಗುತ್ತಿಗೆ ಮಂಜೂರಾತಿ ಅವಧಿಯು ದಿನಾಂಕ: 15–03–2003 ಕ್ಕೆ ಮುಕ್ತಾಯಗೊಂಡಿರುತ್ತದೆ. ಶ್ರೀ ಆರ್. ರಾಮಲಿಂಗರೆಡ್ಡಿ ಎಂಬುವರು ಸದರಿ ಶಾಲೆಯವರು 2–00 ಎಕರೆ ಪ್ರದೇಶಕ್ಕಿಂತ ಹೆಚ್ಚುವರಿ ಜಾಗವನ್ನು ಒತ್ತುವರಿ ಮಾಡಿಕೊಂಡಿರುತ್ತಾರೆಂದು ಲೋಕಾಯುಕ್ತರವರಿಗೆ ದೂರನ್ನು ನೀಡಿರುತ್ತಾರೆ. ಆ ಸಂಬಂಧ ಲೋಕಾಯುಕ್ತ ಕಚೇರಿಗೆ ಕಡತವನ್ನು ಸಲ್ಲಿಸಿದ್ದು, ಸದರಿ ಕಡತವು ಹಿಂದಿರುಗಿ ಬರಲು ವಿಳಂಬವಾದ್ದರಿಂದ ಸದರಿ ಶಾಲೆಯು ಗುತ್ತಿಗೆ ಅವಧಿಯನ್ನು ನವೀಕರಿಸಲು ವಿಳಂಬವಾಗಿರುತ್ತದೆಂದು ಮುಳಬಾಗಿಲು ಗ್ರಾಮದ ಸ.ನಂ. 58 ರಲ್ಲಿ ಒಟ್ಟು 13–00 ಎಕರೆ ಜಮೀನಿದ್ದು, ಇದರಲ್ಲಿ 2–00 ಎಕರೆ ಜಮೀನಿನಲ್ಲಿ ಲೂರ್ದು ಶಾಲೆಯವರು ಶಾಲ ಕಟ್ಟಡ ಕಟ್ಟಿಕೊಂಡು ಕಾಂಪೌಂಡ್ ಹಾಕಿರುತ್ತಾರೆ. ಎಲ್ಲಾ ಹಂತದಲ್ಲಿ ಅಭಿವೃದ್ಧಿಯನ್ನು ಹೊಂದಿದ್ದು, ಮುಂದಿನ ಅವಧಿಗೆ ಗುತ್ತಿಗೆ ವಿಸ್ತರಣೆಯು ಅವಶ್ಯಕವಾಗಿರುತ್ತದೆ ಎಂದು ತಿಳಿಸಿರುತ್ತಾರೆ.

ಮುಂದುವರೆದು, ಮೇಲೆ ಓದಲಾದ ಕ್ರಮಸಂಖ್ಯೆ: 4 ರ ಪತ್ರಗಳಲ್ಲಿ ಜಿಲ್ಲಾಧಿಕಾರಿಯವರು ಸದರಿ ಶಾಲೆಯವರು ಪುರಸಭೆ ಕಾರ್ಯಾಲಯ ಮುಳಬಾಗಿಲುರವರಿಗೆ ದಿನಾಂಕ: 16–03–2003 ರಿಂದ 2010 ರವರೆಗೆ ಗುತ್ತಿಗೆ ಹಣವನ್ನು ಪಾವತಿಸಿರುತ್ತಾರೆ. ತಹಶೀಲ್ದಾರ್ ಮುಳಬಾಗಿಲುರವರ ವರದಿಯಂತೆ ಪ್ರಸ್ತಾಪಿತ ಶಾಲೆಯವರು 2–00 ಎಕರೆಗಿಂತ ಹೆಚ್ಚುವರಿ ಜಾಗವನ್ನು ಒತ್ತುವರಿ ಮಾಡಿರುವುದಿಲ್ಲವೆಂದು, ಲೋಕಾಯುಕ್ತದಲ್ಲಿ ಪ್ರಕರಣವು ಬಾಕಿಯಿರುವುದಿಲ್ಲ ಮತ್ತು ಲೂರ್ದು ಇಂಗ್ಲೀಷ್ ಪ್ರೈಮರಿ ವಿದ್ಯಾ ಸಂಸ್ಥೆಯು ಸ್ಥಳೀಯವಾಗಿ ವಿದ್ಯಾರ್ಥಿ ಸಮುದಾಯಕ್ಕೆ ಒಳ್ಳೆಯ ಶಿಕ್ಷಣ ನೀಡುತ್ತಿದ್ದು, ಸದರಿ ಶಾಲೆಯು ಎಲ್ಲಾ ಹಂತದಲ್ಲಿ ಅಭಿವೃದ್ಧಿ ಹೊಂದಿರುತ್ತದೆ ಗುತ್ತಿಗೆ ಅವಧಿ ವಿಸ್ತರಿಸಿದ್ದಲ್ಲಿ, ಸಾರ್ವಜನಿಕರಿಗೆ ಹಾಗೂ ವಿದ್ಯಾರ್ಥಿ ಸಮುದಾಯಕ್ಕೆ ಅನುಕೂಲವಾಗುತ್ತದೆಂದು ಹಾಗೂ ಉಪ ನೋಂದಣಾಧಿಕಾರಿ ಮುಳಬಾಗಿಲು ರವರ ವರದಿಯಂತೆ, ಮುಳಬಾಗಿಲು ಗ್ರಾಮದ ಸ.ನಂ. 58 ರಲ್ಲಿ 2–00 ಎಕರೆ ಜಮೀನಿನ ಪ್ರಚಲಿತ ಮಾರುಕಟ್ಟೆ ದರ ಎಕರೆಗೆ ರೂ.9,00,000/– (ಒಂಭತ್ತು ಲಕ್ಷ)ಗಳೆಂದು ವರದಿ ಮಾಡಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 112 ಎಲ್.ಜಿ.ಕೆ 2011, ಬೆಂಗಳೂರು ದಿನಾಂಕ: 06–12–2014**

ಕೋಲಾರ ಜಿಲ್ಲೆ ಮುಳಬಾಗಿಲು ತಾಲ್ಲೂಕು, ಕಸಬಾ ಹೋಬಳಿ, ಮುಳಬಾಗಿಲು ಗ್ರಾಮದ ಸ.ನಂ. 58 ರಲ್ಲಿ 2–00 ಎಕರೆ ಜಮೀನನ್ನು, ಪ್ರಚಲಿತ ಮಾರುಕಟ್ಟೆ ದರದ ಶೇಕಡ 10 ರಷ್ಟು ಗುತ್ತಿಗೆ ದರ ವಿಧಿಸಿ ಹಾಗೂ ಪ್ರತಿ 2 ವರ್ಷಕ್ಕೊಮ್ಮೆ ಶೇ.10 ರಷ್ಟು ಹೆಚ್ಚಿಸುವ ಷರತ್ತಿಗೊಳಪಟ್ಟು ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969 ರ ನಿಯಮ 19(1)(ಎ) ರನ್ವಯ "ಶೈಕ್ಷಣಿಕ ಉದ್ದೇಶಕ್ಕಾಗಿ" ಹಾಗೂ ಸದರಿ ನಿಯಮಾವಳಿಯ ನಿಯಮ 19(3)(ಬಿ) ರನ್ವಯ ಆದೇಶ ಹೊರಡಿಸಿದೆ ಮುಂದಿನ 30 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಲೂರ್ದು ಇಂಗ್ಲೀಷ್ ಹೈಯರ್ ಪ್ರೈಮರಿ ಶಾಲೆ ಮುಳಬಾಗಿಲು ಇವರಿಗೆ ಈ ಕೆಳಗಿನ ಷರತ್ತಿಗೊಳಪಟ್ಟು ಮಂಜೂರು ಮಾಡಲಾಗಿದೆ.

1. ಪ್ರಚಲಿತ ಮಾರುಕಟ್ಟೆ ದರದ ಶೇ.10ರಷ್ಟು ವಿಧಿಸಿ ಸದರಿ ಗುತ್ತಿಗೆ ದರವನ್ನು ಪ್ರತಿ ಎರಡು ವರ್ಷಗಳಿಗೊಮ್ಮೆ ಶೇ.10ರಂತೆ ಹೆಚ್ಚಿಸುವ ಹಾಗೂ ನಿಯಮಾನುಸಾರ ಇತರೆ ಶುಲ್ಕವನ್ನು ಪಾವತಿಸತಕ್ಕದ್ದು.
2. ಮಂಜೂರಾದ ಜಮಿನನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸತಕ್ಕದ್ದು.
3. ಮಂಜೂರಾದ ಭೂಮಿಯನ್ನು ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಬಳಸತಕ್ಕದ್ದಲ್ಲ.
4. ಮಂಜೂರಾದ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ಕ್ರಮವಹಿಸತಕ್ಕದ್ದು.
5. ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.

6. ಮಂಜೂರಾದ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಮಾರಾಟ ಮಾಡುವುದಾಗಲೀ, ಗುತ್ತಿಗೆ/ಉಪಗುತ್ತಿಗೆಗೆ ನೀಡುವುದಾಗಲೀ, ಅಡಮಾನ, ವರ್ಗಾವಣೆ, ದಾನ, ಇತರೆ ಯಾವುದೇ ರೀತಿಯ ಪರಭಾರೆಯನ್ನು ಮಾಡಬಾರದು.

7. ಮಂಜೂರಾದ ಜಮೀನಿನ ಯಾವುದೇ ಭಾಗವು ಸಾರ್ವಜನಿಕ ಉದ್ದೇಶಕ್ಕೆ ಅಗತ್ಯವಾಗಿದ್ದಲ್ಲಿ, ಸರ್ಕಾರವು ಸದರಿ ಜಮೀನನ್ನು ಪರಿಹಾರ ನೀಡದೇ ಹಿಂತೆಗುಕೊಳ್ಳುವ ಹಕ್ಕನ್ನು ಹೊಂದಿರುತ್ತದೆ.

8. ಮಂಜೂರಾದ ಜಮೀನು ಸಂಸ್ಥೆಗೆ ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.

9. ಮಂಜೂರಾದ ಜಮೀನಿನಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರವಾನಗಿಗಳನ್ನು ಸಂಬಂಧಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು ಹಾಗೂ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ರೀತಿಯ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.

10. ಮಂಜೂರಾದ ಜಮೀನು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ದವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ ಈ ಮಂಜೂರಾತಿ ಆದೇಶ ತನ್ನಷ್ಟಕ್ಕೆ ತಾನೇ ರದ್ದಾಗುವುದು ಹಾಗೂ ಯಾವುದೇ ಪರಿಹಾರ ನೀಡದೇ ಮಂಜೂರಾದ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗುವುದು.

11. ಜಿಲ್ಲಾಧಿಕಾರಿಗಳು ಮಂಜೂರಾದ ಜಮೀನನ್ನು ಫಲಾನುಭವಿಗಳಿಗೆ ಹಸ್ತಾಂತರಿಸುವಾಗ ಮಂಜೂರಾದ ಪ್ರದೇಶದ ವಾಸ್ತವ ಪರಿಸ್ಥಿತಿಗಳನ್ನು ಗಮನದಲ್ಲಿಟ್ಟುಕೊಂಡು ಪೂರಕವಾದ ಷರತ್ತುಗಳನ್ನು ವಿಧಿಸಬಹುದಾಗಿದೆ.

(ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ464 ವೆಚ್ಚ 7/2013 ದಿನಾಂಕ: 27-08-2013 ರ ಸಹಮತಿಯೊಂದಿಗೆ ಹೊರಡಿಸಿದೆ.)

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

PR-217

SC-50

**ಉಮಾದೇವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಮಂಜೂರಾತಿ-1)

## ಸಹಕಾರ ಸಚಿವಾಲಯ

**ವಿಷಯ :** ಸಹಕಾರ ಇಲಾಖೆಯ ಕಛೇರಿ ಕಟ್ಟಡಗಳ ನಿರ್ಮಾಣ" ಯೋಜನೆಯಡಿ 2014-15ನೇ ಸಾಲಿನ ಆಯ-ವ್ಯಯದಲ್ಲಿ ಮಂಜೂರಾಗಿರುವ ರೂ.50.00 ಲಕ್ಷ ಆರ್ಥಿಕ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಸಿಒ 109 ಸಿಎಲ್‌ಎಂ 2014, ದಿನಾಂಕ: 30-05-2014 ಹಾಗೂ ದಿನಾಂಕ: 15-09-2014

2. ಸಹಕಾರ ಸಂಘಗಳ ಜಂಟಿ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ) ಇವರ ಪತ್ರ ಸಂಖ್ಯೆ:ಆರ್‌ಸಿಎಸ್/ಎಡಿಎಂ-2/24/2014-15, ದಿನಾಂಕ: 12-02-2015

**ಪ್ರಸ್ತಾವನೆ:-**

2014-15 ನೇ ಸಾಲಿನ ಸಹಕಾರ ಇಲಾಖೆಯ ಕಛೇರಿ ಕಟ್ಟಡಗಳ ನಿರ್ಮಾಣ ಯೋಜನೆಯ ಲೆಕ್ಕ ಶೀರ್ಷಿಕೆ 386-ನಿರ್ಮಾಣ-4425-00-107-0-11-(ಯೋಜನೆ) ಅಡಿಯಲ್ಲಿ ರೂ 50.00 ಲಕ್ಷಗಳ ಆಯ-ವ್ಯಯ ಅವಕಾಶ ಕಲ್ಪಿಸಲಾಗಿದ್ದು, ಮೇಲೆ ಓದಲಾದ (1)ರ ಸರ್ಕಾರದ ಆದೇಶಗಳಲ್ಲಿ ಈ ಯೋಜನೆಯಡಿ ದಿನಾಂಕ: 30-05-2014 ರ ಆದೇಶದಲ್ಲಿ ರೂ. 12-50 ಲಕ್ಷ ಹಾಗೂ ದಿನಾಂಕ: 15-09-2014 ರ ಆದೇಶದಲ್ಲಿ ರೂ 12-50 ಲಕ್ಷ ಒಟ್ಟು ರೂ 25-00 ಲಕ್ಷಗಳನ್ನು ಬಿಡುಗಡೆಗೊಳಿಸಲಾಗಿರುತ್ತದೆ.

ಮೇಲೆ ಓದಲಾದ (2)ರ ಸಹಕಾರ ಸಂಘಗಳ ಜಂಟಿ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ) ಇವರ ಪ್ರಸ್ತಾವನೆಯಲ್ಲಿ ಈಗಾಗಲೇ ಬಿಡುಗಡೆಯಾದ ರೂ 25.00 ಲಕ್ಷಗಳಲ್ಲಿ ರೂ 10.00 ಲಕ್ಷಗಳಿಗೆ ಬಳಕೆ ಪ್ರಮಾನ ಪತ್ರ ಸಲ್ಲಿಸಿದ್ದು, ಸಹಕಾರ ಸಂಘಗಳ ಉಪನಿಬಂಧಕರು ಚಿಕ್ಕಮಗಳೂರು ಜಿಲ್ಲೆ ಇದರ ಕಟ್ಟಡ ಸುತ್ತಾ ಕಾಂಪೌಂಡ ನಿರ್ಮಾಣಕ್ಕಾಗಿ ರೂ 11.25 ಲಕ್ಷಗಳ ಕಾಮಗಾರಿಗೆ ಆಡಳಿತಾತ್ಮಕ ಅನುಮೋದನೆಯಾಗಿ ಕಾಮಗಾರಿ ಕೈಗೊಂಡಿದ್ದು, ಸದರಿ ಮೊತ್ತಕ್ಕೆ ಖಜಾನೆಗೆ ಬಿಲ್ಲು ಸಲ್ಲಿಕೆಯಾಗಿರುವುದಾಗಿ ತಿಳಿಸಿರುತ್ತಾರೆ. ಈಗಾಗಲೇ ಬಿಡುಗಡೆಯಾಗಿರುವ ರೂ 25.00 ಲಕ್ಷಗಳಲ್ಲಿ ರೂ 21.25 ಲಕ್ಷ ಬಳಕೆಯಾಗಿ ಬಳಕೆ ಪ್ರಮಾಣ ಪತ್ರ ನೀಡಿ, 3.75 ಲಕ್ಷ ಬಾಕಿ ಉಳಿದಿರುವುದಾಗಿ ತಿಳಿಸಿರುತ್ತಾರೆ.

ಮುಂದುವರೆದು, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ್ ಕಛೇರಿ ಕಟ್ಟಡ ಶಿಥಿಲಾವಸ್ಥೆಯಲ್ಲಿರುವುದರಿಂದ ಸದರಿ ಕಛೇರಿ ದುರಸ್ಥಿಗೆ ರೂ 9.00 ಲಕ್ಷಗಳನ್ನು ಹಾಗೂ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಕುಮಟಾ ಉಪ ವಿಭಾಗ ರವರ ಕಛೇರಿ ಸುತ್ತಾ ಕಾಂಪೌಂಡ ಕಟ್ಟಲು ರೂ 5.00 ಲಕ್ಷ ಹೀಗೆ ಒಟ್ಟು ರೂ 14.00 ಲಕ್ಷಗಳನ್ನು ಅವಶ್ಯವಿರುವುದಾಗಿ ತಿಳಿಸಿ, ಸಹಕಾರ ಇಲಾಖೆಯ ಕಛೇರಿ ಕಟ್ಟಡ ನಿರ್ಮಾಣವಾಗಿರುವುದರಿಂದ ಬೀದರ್ ಕಛೇರಿ ದುರಸ್ಥಿಗೆ ಅನುಮತಿಯನ್ನು ಮತ್ತು 2014-15ನೇ ಸಾಲಿನಲ್ಲಿ ಬಿಡುಗಡೆಗೆ ಬಾಕಿ ಇರುವ ರೂ 25.00 ಲಕ್ಷಗಳನ್ನು ಬಿಡುಗಡೆ ಮಾಡಲು ಕೋರಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ ಬೀದರ್ ಉಪವಿಭಾಗದ ಕಾಮಗಾರಿ ಸಂಬಂಧ ಆರ್ಥಿಕ ಇಲಾಖೆಯು ಅಪೇಕ್ಷಿಸಿದ ಮಾಹಿತಿಯನ್ನು ಒದಗಿಸಲಾಗಿರುತ್ತದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 109 ಸಿಎಲ್‌ಎಂ 2014, ಬೆಂಗಳೂರು, ದಿನಾಂಕ: 02-03-2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2014-15ನೇ ಸಾಲಿನ ಆಯವ್ಯಯದಲ್ಲಿ **"ಸಹಕಾರ ಇಲಾಖೆಯ ಕಛೇರಿ ಕಟ್ಟಡಗಳ ನಿರ್ಮಾಣ" ಲೆಕ್ಕ ಶೀರ್ಷಿಕೆ 386-ನಿರ್ಮಾಣ-4425-00-107-0-11 (ಯೋಜನೆ)** ಅಡಿಯಲ್ಲಿ **ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ್ ಉಪವಿಭಾಗದ ಕಛೇರಿ ಕಟ್ಟಡ ದುರಸ್ಥಿ ಹಾಗೂ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಕುಮಟಾ ಉಪ ವಿಭಾಗ ರವರ ಕಛೇರಿ ಸುತ್ತಾ ಕಾಂಪೌಂಡ ಕಟ್ಟಲು ಮೂರನೇಯ ಕಂತಾಗಿ** ಒಟ್ಟು ಅವಕಾಶದ 1/4 ನೇ ಭಾಗದ ಮೊಬಲಗಿನ **ರೂ. 12.50 ಲಕ್ಷಗಳು (ಹನ್ನೆರಡು ಲಕ್ಷ ಐವತ್ತು ಸಾವಿರ ರೂಪಾಯಿಗಳು ಮಾತ್ರ)** ಬಿಡುಗಡೆಗೊಳಿಸಿ ಆದೇಶಿಸಿದೆ.

ಈ ಆದೇಶದಲ್ಲಿ ಬಿಡುಗಡೆ ಮಾಡಲಾದ ಮೊತ್ತದ ಬಿಲ್ಲುಗಳಿಗೆ ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ ಬೆಂಗಳೂರು ಇವರು ಮೇಲು ಸಹಿ ಮಾಡಲು ಹಾಗೂ ಸಹಕಾರ ಸಂಘಗಳ ಜಂಟಿ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ) ಕೇಂದ್ರ ಕಛೇರಿ ಇವರು ಹಣ ಡ್ರಾ ಮಾಡಲು, ಹಾಗೂ ಡ್ರಾ ಮಾಡಿದ ಹಣವನ್ನು ಸಹಕಾರ ಸಂಘಗಳ ನಿಬಂಧಕರು ಸಂಬಂಧಿಸಿದ ನಿರ್ಮಿತಿ ಕೇಂದ್ರಗಳಿಗೆ ಬಿಡುಗಡೆ ಮಾಡಲು ಅಧಿಕಾರ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ **ಟಿಪ್ಪಣಿ ಸಂಖ್ಯೆ:ಆಇ 82 ವೆಚ್ಚ-2/2015, ದಿನಾಂಕ: 26-02-2015** ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**PR-189**
**SC-50**

**ಎಂ. ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

## ಸಹಕಾರ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕ್ ನಿಯಮಿತ, ಬೆಂಗಳೂರು ಇದರ ದಾವಾ ಪಂಚಾಯ್ತಿ ನ್ಯಾಯಾಲಯದಲ್ಲಿ ಸಂಗ್ರಹವಾಗುವ ದಾವಾ ಶುಲ್ಕ ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಇ 391 ಎಸಸೇ 2012, ದಿನಾಂಕ: 26-11-2012.
2. ಸರ್ಕಾರದ ಆದೇಶ ಸಂಖ್ಯೆ: ಸಇ 421 ಎಸಸೇ 2005, ದಿನಾಂಕ: 07-01-2006.
3. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಆರ್‌ಸಿಎಸ್/ಡಿಎಪಿ/ಡಿ1/50/2013-14, ದಿನಾಂಕ: 24-10-2013.

**ಪ್ರಸ್ತಾವನೆ:-**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕ್ ನಿಯಮಿತ, ಬೆಂಗಳೂರು ಇಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 69 ಮತ್ತು 70ರ ಅಡಿ ದಾಖಲಾಗುವ ದಾವೆಗಳನ್ನು ಇತ್ಯರ್ಥಪಡಿಸಲು ಸದರಿ ಬ್ಯಾಂಕಿನಲ್ಲಿ ಪ್ರತ್ಯೇಕ ದಾವಾ ಪಂಚಾಯ್ತಿ ನ್ಯಾಯಾಲಯವನ್ನು ಸ್ಥಾಪಿಸಿ ಸಹಕಾರ ಸಂಘಗಳ ಜಂಟಿ ನಿಬಂಧಕರ ಹುದ್ದೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1958ರ ನಿಯಮ 441ರ ಪ್ರಕಾರ ಸೃಜಿಸಲಾಗಿದೆ. ಸದರಿ ದಾವಾ ಪಂಚಾಯ್ತಿ ನ್ಯಾಯಾಲಯವು ದಿನಾಂಕ: 02-08-2013 ರಿಂದ ಕಾರ್ಯಾರಂಭ ಮಾಡಿರುತ್ತದೆ. ದಾವಾ ಪಂಚಾಯ್ತಿ ನ್ಯಾಯಾಲಯದಲ್ಲಿ ಸಂಗ್ರಹವಾಗುವ ದಾವಾ ಶುಲ್ಕವನ್ನು ಅಪೆಕ್ಸ್ ಬ್ಯಾಂಕ್ ಮತ್ತು ಸರ್ಕಾರದ ನಡುವೆ ಹಂಚಿಕೆ ಮಾಡಲು ಓದಲಾದ (3)ರ ನಿಬಂಧಕರ ಪತ್ರದ ಮೂಲಕ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯಲ್ಲಿ ನಿಬಂಧಕರು ಇದೇ ರೀತಿ ವ್ಯವಸ್ಥೆಯು ಕರ್ನಾಟಕ ರಾಜ್ಯ ಪಟ್ಟಣ ಸಹಕಾರ ಬ್ಯಾಂಕುಗಳ ಮಹಾಮಂಡಳದಲ್ಲಿ ಇದ್ದು ಅಲ್ಲಿ ಮಹಾಮಂಡಳ ಮತ್ತು ಸರ್ಕಾರಕ್ಕೆ ಶೇ.65:35ರ ಹಂಚಿಕೆ ಮಾಡಲಾಗಿದೆಯೆಂದು ಅದೇ ಪ್ರಮಾಣದಲ್ಲಿ ಅಪೆಕ್ಸ್ ಬ್ಯಾಂಕ್ ನ್ಯಾಯಾಲಯಕ್ಕೂ ಹಂಚಿಕೆ ಮಾಡಬೇಕೆಂದು ಶಿಫಾರಸ್ಸು ಮಾಡಿರುತ್ತಾರೆ.

ಈ ಬಗ್ಗೆ ಪರಿಶೀಲಿಸಿದೆ. ಓದಲಾದ (2)ರ ಸರ್ಕಾರದ ಆದೇಶದಲ್ಲಿ ಪಟ್ಟಣ ಬ್ಯಾಂಕುಗಳ ಮಹಾಮಂಡಳ ದಾವಾ ಪಂಚಾಯ್ತಿ ನ್ಯಾಯಾಲಯದಲ್ಲಿ ಸಂಗ್ರಹವಾಗುವ ದಾವಾ ಶುಲ್ಕವನ್ನು ಪಟ್ಟಣ ಬ್ಯಾಂಕುಗಳ ಮಹಾಮಂಡಳ ಮತ್ತು ಸರ್ಕಾರಕ್ಕೆ ಶೇ.65:35ರಷ್ಟು ಹಂಚಿಕೆ ಮಾಡಿ ಆದೇಶಿಸಲಾಗಿರುತ್ತದೆ.

ಈ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಇ 144 ಸಿಎಲ್‌ಎಂ 2013, ಬೆಂಗಳೂರು, ದಿನಾಂಕ: 09-03-2015**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕ್ ನಿಯಮಿತ, ಬೆಂಗಳೂರು ಇಲ್ಲಿ ಸಹಕಾರ ಸಂಘಗಳ ಜಂಟಿ ನಿಬಂಧಕರ ಅಧ್ಯಕ್ಷತೆಯ ದಾವಾ ಪಂಚಾಯ್ತಿ ನ್ಯಾಯಾಲಯದಲ್ಲಿ ಸಂಗ್ರಹವಾದ ದಾವಾ ಶುಲ್ಕದ ಮೊತ್ತದಲ್ಲಿ ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕ್ ನಿಯಮಿತ, ಬೆಂಗಳೂರು ಇದಕ್ಕೆ ಶೇಕಡಾ 65ರಷ್ಟು ಮತ್ತು ಸರ್ಕಾರಕ್ಕೆ ಶೇಕಡಾ 35ರಷ್ಟನ್ನು ಹಂಚಿಕೆ ಮಾಡಲು ಮುಂದಿನ ಆದೇಶದವರೆಗೆ ಮಂಜೂರಾತಿ ನೀಡಲಾಗಿದೆ. ಹಂಚಿಕೆ ಮಾಡಿರುವ ಪ್ರಮಾಣದಲ್ಲಿ ಕೂಡಲೇ ಸರ್ಕಾರಕ್ಕೆ ವಂತಿಗೆ ಪಾವತಿಸಿ ಸರ್ಕಾರಕ್ಕೆ ವರದಿ ಮಾಡತಕ್ಕದ್ದೆಂದು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**PR-239**
**SC-25**

**ಎಂ. ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಚಾಮರಾಜನಗರ ಜಿಲ್ಲೆ, ಚಾಮರಾಜನಗರ ತಾಲ್ಲೂಕು, ಕಸಬಾ ಹೋಬಳಿ, ಕೆಲ್ಲಂಬಳ್ಳಿ ಗ್ರಾಮದ ಸರ್ವೆ ನಂ.118 ಮತ್ತು 119 ರ ಜಮೀನುಗಳನ್ನು ಕೈಗಾರಿಕಾ ಪ್ರದೇಶಗಳು ಮತ್ತು ಏಕ ಘಟಕ ಸಂಕೀರ್ಣಗಳಿಗಾಗಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯವರಿಗೆ ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ:**
1) ಜಿಲ್ಲಾಧಿಕಾರಿಗಳು, ಚಾಮರಾಜನಗರ ಜಿಲ್ಲೆ, ಚಾಮರಾಜನಗರ ಅವರ ಪತ್ರ ಸಂಖ್ಯೆ:ಎಲ್‌ಎನ್‌ಡಿ/ಸಿಆರ್/30/2014-15, ದಿ: 16-01-2015 ಮತ್ತು ದಿನಾಂಕ: 24/02/2015 ರ ಅ.ಸ.ಪತ್ರ.
2) ಸರ್ಕಾರದ ಆದೇಶ ಸಂಖ್ಯೆ:FEE 185 FAF 2011, ದಿ: 15-05-2014.
3) ಸರ್ಕಾರದ ಆದೇಶ ಸಂಖ್ಯೆ:FEE 75 FLL 2014, ದಿ: 24-07-2014.

**ಪ್ರಸ್ತಾವನೆ:-**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಪತ್ರದಲ್ಲಿ ಜಿಲ್ಲಾಧಿಕಾರಿ, ಚಾಮರಾಜನಗರ ಜಿಲ್ಲೆ, ಚಾಮರಾಜನಗರ ರವರು ಚಾಮರಾಜನಗರ ಜಿಲ್ಲೆಯಲ್ಲಿ ಕೈಗಾರಿಕೆ ಘಟಕ ಸ್ಥಾಪಿಸುವುದು ಜಿಲ್ಲೆಯ ಅಭಿವೃದ್ಧಿ ದೃಷ್ಟಿಯಿಂದ ಅತಿ ಅಗತ್ಯವಾಗಿದೆಯೆಂದು ಈ ಸಂಬಂಧ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ ವತಿಯಿಂದ ಕೈಗಾರಿಕಾ ಉದ್ದೇಶಕ್ಕಾಗಿ ಕೆಲ್ಲಂಬಳ್ಳಿ, ಮತ್ತು ಬದನಗುಪ್ಪೆ ಗ್ರಾಮಗಳಲ್ಲಿನ ಖಾಸಗಿ ಜಮೀನುಗಳನ್ನು ಭೂಸ್ವಾಧೀನಪಡಿಸಿಕೊಳ್ಳಲಾಗುತ್ತಿದ್ದು, ಸದರಿ ಜಮೀನುಗಳ ಆಯಕಟ್ಟಿಗೆ ಹೊಂದಿಕೊಂಡಂತೆ ಇರುವ ಕೆಲ್ಲಂಬಳ್ಳಿ ಗ್ರಾಮದ ಸರ್ವೆ ನಂ.118 ಮತ್ತು 119 ರ ಜಮೀನುಗಳನ್ನು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯವರಿಗೆ ಹಸ್ತಾಂತರಿಸುವ ಬಗ್ಗೆ ಪ್ರಸ್ತಾಪಿಸಿರುತ್ತಾರೆ.

ಗೌರವಾನ್ವಿತ ಸರ್ವೋಚ್ಚ ನ್ಯಾಯಾಲಯದಲ್ಲಿ ದಾಖಲಾಗಿರುವ ರಿಟ್ ಅರ್ಜಿ ಸಂಖ್ಯೆ: 202/1995 ಶ್ರೀ ಗೋದವರ್ಮನ್ ತಿರುಮಲಪಾದ್ ವಿರುದ್ಧ ರಾಜ್ಯ ಸರ್ಕಾರಗಳು ಪ್ರಕರಣಗಳನ್ನು ದಿನಾಂಕ: 12-12-1996 ರಲ್ಲಿ ಮಾನ್ಯ ಸರ್ವೋಚ್ಛ ನ್ಯಾಯಾಲಯವು ನೀಡಿರುವ ತೀರ್ಪಿನಲ್ಲಿ ಅರಣ್ಯ ಮತ್ತು ಅರಣ್ಯ ಭೂಮಿ ಎಂಬುದರ ಬಗ್ಗೆ ಪದಕೋಶದಲ್ಲಿನ ಅರ್ಥದಲ್ಲಿ (dictionary meaning) ವ್ಯಾಖ್ಯಾನಿಸಿದ್ದು, ಅದರಂತೆ, ಸರ್ಕಾರಿ ಭೂಮಿ ಹಾಗೂ ಕಂದಾಯ ಇಲಾಖೆಯಿಂದ ಅರಣ್ಯ ಇಲಾಖೆಗೆ ಲ್ಯಾಂಡ್ ಬ್ಯಾಂಕ್‌ಗಾಗಿ ವರ್ಗಾಯಿಸಿರುವ ಸಿ ಮತ್ತು ಡಿ ವರ್ಗದ ಜಮೀನುಗಳನ್ನು ಪುನರ್ರಚಿತ ತಜ್ಞರ-1 ಸಮಿತಿಯು ಗ್ರಾಮವಾರು, ಸರ್ವೆ ನಂಬರ್‌ವಾರು ಪರಿಶೀಲಿಸಿ, ಅರಣ್ಯ ಲಕ್ಷಣಗಳುಳ್ಳ ಸರ್ಕಾರಿ ಭೂಮಿ ಮತ್ತು ಕಂದಾಯ ಇಲಾಖೆಯಿಂದ ವರ್ಗವಾಗಿರುವ ಸಿ ಮತ್ತು ಡಿ ವರ್ಗದ ಜಮೀನುಗಳಲ್ಲಿ ಅರಣ್ಯ ಲಕ್ಷಣಗಳುಳ್ಳ ಮರಗಳಿರುವ ಜಮೀನನ್ನು ಮತ್ತು ಅರಣ್ಯ ಲಕ್ಷಣಗಳನ್ನು ಹೊಂದಿರದ ಮರಗಳೇ ಇಲ್ಲದ ಜಮೀನನ್ನು ಸೇರಿಸಿ ಡೀಮ್ಡ್ ಫಾರೆಸ್ಟ್ ಎಂದು ಗುರುತಿಸಿ, ಮಾನ್ಯ ಸರ್ವೋಚ್ಛ ನ್ಯಾಯಾಲಯಕ್ಕೆ ಅಫಿಡವಿಟ್ ಸಲ್ಲಿಸಲಾಗಿದೆ. ಇದರಿಂದಾಗಿ ಶಿಕ್ಷಣ, ಆರೋಗ್ಯ, ಕುಡಿಯುವ ನೀರಿನ ಸರ್ಕಾರದ ಉದ್ದೇಶಿತ ಯೋಜನೆಗಳ ಅನುಷ್ಠಾನಕ್ಕಾಗಿ, ಸರ್ಕಾರಿ ಭೂಮಿ ಇಲ್ಲದಂತಾಗಿರುವುದು ಸರ್ಕಾರದ ಗಮನಕ್ಕೆ ಬಂದಿರುವ ಹಿನ್ನೆಲೆಯಲ್ಲಿ, ಪುನರ್ ರಚಿತ ತಜ್ಞರ ಸಮಿತಿ-1 ಗುರುತಿಸಿರುವ ಡೀಮ್ಡ್ ಫಾರೆಸ್ಟ್ ಬಗ್ಗೆ 1 ಹೆಕ್ಟೇರ್ ಪ್ರದೇಶದಲ್ಲಿ ಸ್ವಾಭಾವಿಕವಾಗಿ ಬೆಳೆದ 30 ಸೆಂ.ಮೀ. ಹಾಗೂ ಅದಕ್ಕೂ ಅಧಿಕ ಸುತ್ತಳತೆ ಇರುವ 50 ಅಥವಾ ಅದಕ್ಕಿಂತ ಹೆಚ್ಚಿನ ಗಿಡಗಳಿದ್ದಲ್ಲಿ, ಅಥವಾ ನೆಡುತೋಪು ಆಗಿದ್ದಲ್ಲಿ, 1 ಹೆಕ್ಟೇರ್ ಪ್ರದೇಶದಲ್ಲಿ 30 ಸೆಂ.ಮೀ. ಹಾಗೂ ಅಧಿಕ ಸುತ್ತಳತೆಯುಳ್ಳ 100 ಅಥವಾ ಅದಕ್ಕಿಂತಲೂ ಹೆಚ್ಚು ಗಿಡಗಳು ಇರುವ ಪ್ರದೇಶವನ್ನು ಅರಣ್ಯ ಪ್ರದೇಶವೆಂದು ಗುರುತಿಸಲು ಮಾನದಂಡವನ್ನು ರೂಪಿಸಿ ಸ್ಥಳ ಪರಿಶೀಲನೆ ಮಾಡಿ ವರದಿ ಸಲ್ಲಿಸಲು ಉಲ್ಲೇಖ (2) ರ ಸರ್ಕಾರಿ ಆದೇಶದಲ್ಲಿ ಜಿಲ್ಲಾ ವಿಭಾಗೀಯ ಹಾಗೂ ರಾಜ್ಯ ಮಟ್ಟದ ಸಮಿತಿಯನ್ನು ರಚಿಸಿ ವರದಿ ಸಲ್ಲಿಸಲು ಆದೇಶಿಸಲಾಗಿದೆ.

ಮುಂದುವರೆದು, ದಿ: 15-05-2014 ರ ಆದೇಶದಲ್ಲಿ ಸಾರ್ವಜನಿಕ ಉದ್ದೇಶಕ್ಕೆ ಸರ್ಕಾರಿ ಜಮೀನುಗಳು ಅಗತ್ಯವಿದ್ದರೆ ಡೀಮ್ಡ್ ಫಾರೆಸ್ಟ್ ಬಗ್ಗೆ ಪರಿಶೀಲನೆ ನಡೆಸುವ ಮಧ್ಯದಲ್ಲಿ ಸರ್ಕಾರಿ ಉದ್ದೇಶಕ್ಕೆ ಅಗತ್ಯವಿರುವ ಜಮೀನುಗಳ ವಾಸ್ತವ ಸ್ಥಿತಿಯನ್ನು ಪರಿಶೀಲಿಸಿ ಜಿಲ್ಲಾ ಮಟ್ಟದ ಸಮಿತಿಯಲ್ಲಿ ತೀರ್ಮಾನಿಸಿ, ಸರ್ಕಾರಕ್ಕೆ ವರದಿ ಸಲ್ಲಿಸಲು ಅವಕಾಶ ಇರುತ್ತದೆ. ಅದರಂತೆ, ಚಾಮರಾಜನಗರ ತಾಲ್ಲೂಕು ಕೆಲ್ಲಂಬಳ್ಳಿ ಗ್ರಾವದ ಸರ್ವೆ ನಂ 118 ಮತ್ತು 119 ರಲ್ಲಿ ಒಟ್ಟು 100 ಹೆಕ್ಟೇರ್ ಪ್ರದೇಶಗಳಿಗೆ ಡೀಮ್ಡ್ ಫಾರೆಸ್ಟ್ ಎಂದು ಅಫಿಡವಿಟ್ ಸಲ್ಲಿಸಲಾಗಿದೆ. ಈ ಪೈಕಿ ಕೆಲ್ಲಂಬಳ್ಳಿ ಗ್ರಾಮದ ಸರ್ವೆ ನಂ. 118 ರಲ್ಲಿ 54.03 ಎಕರೆ ಪ್ರದೇಶವನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಚಾಮರಾಜನಗರ ಜಿಲ್ಲೆಯಲ್ಲಿ ಕೇಂದ್ರ ಸರ್ಕಾರದ ಕೇಂದ್ರೀಯ ವಿದ್ಯಾಲಯ ಹಾಗೂ ಮೈಸೂರು ವಿಶ್ವ ವಿದ್ಯಾನಿಲಯದ ಸ್ನಾತ್ತಕೋತ್ತರ ಉಪ ಕೇಂದ್ರವನ್ನು ಸ್ಥಾಪಿಸಲು ಉಲ್ಲೇಖ (3) ರಲ್ಲಿ ಓದಲಾಗಿರುವ ಆದೇಶದಲ್ಲಿ ಜಿಲ್ಲಾಧಿಕಾರಿ, ಚಾಮರಾಜನಗರ ಜಿಲ್ಲೆ, ಚಾಮರಾಜನಗರ ರವರಿಗೆ ಹಸ್ತಾಂತರಿಸಲು ಆದೇಶ ಮಾಡಲಾಗಿದೆ. ಸದರಿ ಸರ್ವೆ ನಂ. 118 ರಲ್ಲಿ ಉಳಿದ ಜಮೀನು ಹಾಗೂ ಸರ್ವೆ ನಂ. 119 ರ ಜಮೀನನ್ನು (ಈ ಎರಡೂ ಸರ್ವೆ ನಂ.ಗಳಲ್ಲಿ) ಬಾಕಿ ಉಳಿದಿರುವ ಒಟ್ಟು 78 1/2 ಹೆಕ್ಟೇರ್ ಅಂದರೆ, 196 ಎಕರೆ ಪ್ರದೇಶವನ್ನು ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಗೆ ಹಸ್ತಾಂತರಿಸುವ ಕುರಿತು ಜಿಲ್ಲಾ ಮಟ್ಟದ ಡೀಮ್ಡ್ ಫಾರೆಸ್ಟ್ ಪರಿಶೀಲನಾ ಸಮಿತಿಯು ದಿ: 11-11-2014 ರ ಸಭೆಯಲ್ಲಿ ನಿರ್ಣಯ ತೆಗೆದುಕೊಂಡಿರುತ್ತದೆ ಎಂಬುದಾಗಿ ತಿಳಿಸಿರುತ್ತಾರೆ.

ಮುಂದುವರೆದು, ಜಿಲ್ಲಾ ಮಟ್ಟದ ಸಮಿತಿಯ ನಿರ್ಣಯದ ಪ್ರಕಾರ ಸದರಿ ಪ್ರದೇಶದಲ್ಲಿ 30 ಸೆ.ಮೀ.ಗಿಂತ ಕಡಿಮೆ ಸಾಂದ್ರತೆಯುಳ್ಳ ನೀಲಗಿರಿ, ಅಕೇಶಿಯಾ ಮರಗಳಿದ್ದು, ದಿ: 15-05-2014ರ ಸರ್ಕಾರಿ ಆದೇಶದಲ್ಲಿ ನಿಗದಿಪಡಿಸಿರುವ ಮಾನದಂಡಗಳ ವ್ಯಾಪ್ತಿಗೆ ಅಲ್ಲಿನ ಮರಗಳು ಅರಣ್ಯದ ಸ್ವರೂಪ ಹೊಂದಿರುವುದಿಲ್ಲವೆಂದು ವರದಿ ಮಾಡುವುದರ ಮೂಲಕ ಚಾಮರಾಜನಗರ ಜಿಲ್ಲೆ, ಚಾಮರಾಜನಗರ ತಾಲ್ಲೂಕು, ಕೆಲ್ಲಂಬಳ್ಳಿ ಗ್ರಾಮದ ಸರ್ವೆ ನಂ. 118 ರಲ್ಲಿ 54.03 ಎಕರೆ ಪ್ರದೇಶವನ್ನು ಶೈಕ್ಷಣಿಕೆ ಉದ್ದೇಶಕ್ಕಾಗಿ ಉಪಯೋಗಿಸಿಕೊಳ್ಳಲು ಅನುಮತಿ ನೀಡಿರುವ ಪ್ರದೇಶವನ್ನು ಹೊರತುಪಡಿಸಿ, ಸದರಿ ಸರ್ವೆ ನಂ.118 ರಲ್ಲಿ ಬಾಕಿ ಉಳಿಯುವ ಪ್ರದೇಶ ಹಾಗೂ ಸರ್ವೆ ನಂ.119 ರಲ್ಲಿನ ಪ್ರದೇಶ ಒಟ್ಟು ಸೇರಿ 78.50 ಹೆಕ್ಟೇರ್ ಅಂದರೆ, 196.00 ಎಕರೆ ಪ್ರದೇಶವನ್ನು ಸಾರ್ವಜನಿಕ, ಉದ್ದೇಶವಾದ ಕೈಗಾರಿಕಾ ಘಟಕ ಸ್ಥಾಪಿಸುವ ಉದ್ದೇಶಕ್ಕಾಗಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ (ಕೆಐಎಡಿಬಿ) ರವರಿಗೆ

ಹಸ್ತಾಂತರಿಸಲು ಅರಣ್ಯ ಇಲಾಖೆಯಿಂದ ಕಂದಾಯ ಇಲಾಖೆಗೆ ಬಿಡುಗಡೆಗೊಳಿಸುವಂತೆ ಜಿಲ್ಲಾಧಿಕಾರಿಗಳು ಚಾಮರಾಜನಗರ ಜಿಲ್ಲೆ, ಚಾಮರಾಜನಗರ ರವರು ಕೋರಿರುತ್ತಾರೆ.

ಜಿಲ್ಲಾಧಿಕಾರಿಗಳು ಚಾಮರಾಜನಗರ ಜಿಲ್ಲೆ, ಚಾಮರಾಜನಗರ ರವರ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ ಅಪಜೀ 75 ಎಫ್‌ಎಲ್‌ಎಲ್ 2014 ಬೆಂಗಳೂರು, ದಿನಾಂಕ: 20–03–2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಎಲ್ಲಾ ಕಾರಣಗಳಿಂದ, ಚಾಮರಾಜನಗರ ಜಿಲ್ಲೆ, ಚಾಮರಾಜನಗರ ತಾಲ್ಲೂಕು, ಕೆಲ್ಲಂಬಳ್ಳಿ ಗ್ರಾಮದ ಸರ್ವೆ ನಂ.118 ರಲ್ಲಿ ಈಗಾಗಲೇ 54.03 ಎಕರೆ ಪ್ರದೇಶವನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಉಪಯೋಗಿಸಿಕೊಳ್ಳಲು ಅನುಮತಿ ನೀಡಿರುವ ಪ್ರದೇಶವನ್ನು ಹೊರತುಪಡಿಸಿ, ಸದರಿ ಸರ್ವೆ ನಂ.118 ರಲ್ಲಿ ಬಾಕಿ ಉಳಿಯುವ ಪ್ರದೇಶ ಹಾಗೂ ಸರ್ವೆ ನಂ.119 ರಲ್ಲಿನ ಪ್ರದೇಶ ಒಟ್ಟು ಸೇರಿ 78 1/2 ಹೆಕ್ಟೇರ್ ಅಂದರೆ, 196.00 ಎಕರೆ (ನೂರಾತ್ತೊಂಬತ್ತಾರು ಎಕರೆ) ಪ್ರದೇಶವನ್ನು ಸಾರ್ವಜನಿಕ ಉದ್ದೇಶವಾದ ಕೈಗಾರಿಕಾ ಘಟಕ ಸ್ಥಾಪಿಸುವ ಉದ್ದೇಶಕ್ಕಾಗಿ, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ (ಕೆಐಎಡಿಬಿ)ರವರಿಗೆ ಹಸ್ತಾಂತರಿಸಲು ಅರಣ್ಯ ಇಲಾಖೆಯಿಂದ ಜಿಲ್ಲಾಧಿಕಾರಿಗಳು, ಚಾಮರಾಜನಗರ ಜಿಲ್ಲೆ, ಚಾಮರಾಜನಗರ ರವರಿಗೆ ಬಿಡುಗಡೆ ಮಾಡಲು ಸರ್ಕಾರ ಅನುಮೋದನೆ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**PR-289** **ಎಲ್. ಶಾರದ**

**SC-100** ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ಸಹಕಾರ ಸಚಿವಾಲಯ

**ವಿಷಯ :** ಸಹಕಾರಿ ಪಿತಾಮಹ ಶ್ರೀ ಸಿದ್ದರಾಮನಗೌಡ ಸಣ್ಣರಾಮನಗೌಡ ಪಾಟೀಲ್ ಇವರ ಹೆಸರಿನಲ್ಲಿ ಮಲ್ಲೇಶ್ವರಂ ಸಹಕಾರ ಸಂಘದ ಆವರಣದಲ್ಲಿ ಸಹಕಾರ ಸೌಧ (ಭವನ) ನಿರ್ಮಾಣ ಮಾಡಲು ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** ಸಹಕಾರ ಸಂಘಗಳ ನಿಬಂಧಕರ ಪತ್ರಗಳ ಸಂಖ್ಯೆ: ಸಸಂನಿ/ಸಮಾಪನೆ/12/2014–15, ದಿನಾಂಕ: 10–07–2014, 06–12–2014, 16–01–2015, 23–01–2015, 16–02–2015 ಹಾಗೂ 26–02–2015.

ಪ್ರಸ್ತಾವನೆ:

ಮೇಲೆ ಓದಲಾದ ಸಹಕಾರ ಸಂಘಗಳ ನಿಬಂಧಕರ ಪತ್ರದಲ್ಲಿ ಸಮಾಪನೆಯಲ್ಲಿರುವ ಮಲ್ಲೇಶ್ವರಂ ಸಹಕಾರ ಸಂಘ ನಿ., 8ನೇ ಅಡ್ಡ ರಸ್ತೆ 3ನೇ ಮುಖ್ಯ ರಸ್ತೆ, ಮಾರ್ಗೋಸಾ ರಸ್ತೆ, ಮಲ್ಲೇಶ್ವರಂ ಇಲ್ಲಿನ 100 x 150 ಚದರ ಅಡಿ ಆಸ್ತಿಯನ್ನು ಈಗಾಗಲೇ ಸಹಕಾರ ಸಂಘಗಳ ನಿಬಂಧಕರ ಹೆಸರಿಗೆ ನೋಂದಣಿ ಮಾಡಿಕೊಂಡಿದ್ದು ಸರ್ಕಾರಕ್ಕೆ ಸೇರಿದ ಈ ಜಾಗದಲ್ಲಿ ಬೆಂಗಳೂರಿನಲ್ಲಿ ಕಾರ್ಯ ನಿರ್ವಹಿಸುತ್ತಿರುವ ವಿವಿಧ ಸಹಕಾರ ಇಲಾಖೆಯ ಕಛೇರಿಗಳು ಒಂದೇ ಕಟ್ಟಡದಲ್ಲಿ ಕಾರ್ಯನಿರ್ವಹಿಸಲು ಅನುಕೂಲವಾಗುವಂತೆ ಹಾಗೂ ಸದರಿ ಕಟ್ಟಡದಲ್ಲಿನ ಒಂದು ಅಂತಸ್ತನ್ನು ಸಹಕಾರಿ ಸಂಸ್ಥೆಗಳು ಉತ್ಪಾದಿಸುವ ವಸ್ತುಗಳ ಪ್ರದರ್ಶನ ಹಾಗೂ ಮಾರಾಟಕ್ಕೆ ಅವಕಾಶ ಕಲ್ಪಿಸುವ ಉದ್ದೇಶದಿಂದ ಬೆಂಗಳೂರಿನ ಮಲ್ಲೇಶ್ವರಂನಲ್ಲಿ "ಸಹಕಾರಿ ಪಿತಾಮಹ ಶ್ರೀ ಸಿದ್ದರಾಮನಗೌಡ ಸಣ್ಣರಾಮನಗೌಡ ಪಾಟೀಲ್ ಇವರ ಹೆಸರಿನಲ್ಲಿ ಸಹಕಾರ ಸೌಧ (ಭವನ) ನಿರ್ಮಿಸಲು ಸರ್ಕಾರದಿಂದ ಯಾವುದೇ ಅನುದಾನ ಪಡೆಯದೇ ಸಹಕಾರ ಅಭಿವೃದ್ಧಿ ನಿಧಿ ಖಾತೆಯಿಂದ ಲಭ್ಯವಿರುವ ರೂ. 2.00 ಕೋಟಿ ಸಮಾಪನೆಯಲ್ಲಿರುವ ಮಲ್ಲೇಶ್ವರಂ ಸಹಕಾರ ಸಂಘದಿಂದ ರೂ. 5.00 ಕೋಟಿ ಸಹಕಾರ ಸಂಘಗಳ ಉಪನಿಬಂಧಕರು ಉತ್ತರ ವಲಯ, ಇವರ ಪಿಡಿ ಖಾತೆಯಿಂದ ರೂ. 0.53 ಕೋಟಿ ಹಾಗೂ ಕಟ್ಟಡ ನಿರ್ಮಾಣಗೊಂಡ ನಂತರ ಬಾಡಿಗೆದಾರರಿಂದ ದೊರೆಯಬಹುದಾದ ಠೇವಣಿಯ ಮುಂಗಡ ಹಣ ರೂ.0.81 ಕೋಟಿ ಸೇರಿ ಒಟ್ಟು ರೂ. 8.34 ಕೋಟಿ ವೆಚ್ಚದಲ್ಲಿ "ಸಹಕಾರ ಸೌಧ" (ಭವನ) ನಿರ್ಮಾಣ ಮಾಡಲು ಆಡಳಿತಾತ್ಮಕ ಅನುಮತಿ ನೀಡುವಂತೆ ಕೋರಿ ಸರ್ಕಾರಕ್ಕೆ ಪ್ರಸ್ತಾವೆ ಸಲ್ಲಿಸಿರುತ್ತಾರೆ.

ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಇ 142 ಸಂಮಾಸ 2014 (ಭಾಗ–3) ಬೆಂಗಳೂರು, ದಿನಾಂಕ: 08–04–2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಮಾಪನೆಯಲ್ಲಿರುವ ಬೆಂಗಳೂರಿನ ಮಲ್ಲೇಶ್ವರಂ ಸಹಕಾರ ಸಂಘದ ಆವರಣದಲ್ಲಿನ ಸರ್ಕಾರಕ್ಕೆ ಸೇರಿದ 100 x 150 ಚದರ ಅಡಿ ಜಾಗದಲ್ಲಿ ಸಹಕಾರಿ ಪಿತಾಮಹ ಶ್ರೀ ಸಿದ್ದರಾಮನಗೌಡ ಸಣ್ಣರಾಮನಗೌಡ ಪಾಟೀಲ್ ಇವರ ಹೆಸರಿನಲ್ಲಿ ಸಹಕಾರ ಸೌಧ (ಭವನ) ನಿರ್ಮಾಣ ಮಾಡಲು ಸರ್ಕಾರದಿಂದ ಯಾವುದೇ ಅನುದಾನ ಪಡೆಯದೇ ಸಹಕಾರ ಅಭಿವೃದ್ಧಿ ಖಾತೆಯಿಂದ ಲಭ್ಯವಿರುವ ರೂ. 2.00 ಕೋಟಿ, ಸಮಾಪನೆಯಲ್ಲಿರುವ ಸಹಕಾರ ಸಂಘದಿಂದ ರೂ. 5.00 ಕೋಟಿ ಸಹಕಾರ ಸಂಘಗಳ ಉಪನಿಬಂಧಕರು ಉತ್ತರ ವಲಯ ಇವರ ಪಿಡಿ ಖಾತೆಯಿಂದ ರೂ. 0.53 ಕೋಟಿ ಹಾಗೂ ಕಟ್ಟಡ ನಿರ್ಮಾಣಗೊಂಡ ನಂತರ ಬಾಡಿಗೆದಾರರಿಂದ ದೊರೆಯಬಹುದಾದ ಠೇವಣಿಯ ಮುಂಗಡ ಹಣ ರೂ. 0.81 ಕೋಟಿ ಸೇರಿ ಒಟ್ಟು ರೂ. 8.34 ಕೋಟಿ ವೆಚ್ಚದಲ್ಲಿ "ಸಹಕಾರ ಸೌಧ" ನಿರ್ಮಾಣವನ್ನು ನಿಯಮಾನುಸಾರ ಕೈಗೊಳ್ಳಲು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಎಫ್‌ಡಿ 109 ವೆಚ್ಚ–2/2015, ದಿನಾಂಕ: 18–03–2015ರಲ್ಲಿ ನೀಡಿರುವ ಸಹಮತಿ ಹಾಗೂ ಕರ್ನಾಟಕ ಸರ್ಕಾರದ (ಕಾರ್ಯಕಲಾಪಗಳ ನಿರ್ವಹಣೆ) ನಿಯಮಗಳು 1977ರ ಮೊದಲನೇ ಅನುಸೂಚಿ ನಿಯಮ 15ರ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

**PR-290**
**SC-50**

## FINANCE SECRETARIAT

**Sub:** Dearness Allowance to Teaching Staff on **UGC/AICTE/ICAR** Scales of pay and Judicial Officers/Pensioners on **NJPC** pay scales-Revision of rates.

**Read:**
(1) G.O.No.FD 10 SRP 2013 dated: 20-05-2013.
(2) G.O.No.FD 12 SRP 2013 (II) dated: 12-06-2013.
(3) G.O.No.FD 22 SRP 2013 dated: 10-10-2013.
(4) G.O.No.FD 07 SRP 2014 dated: 11-04-2014.
(5) G.O.No.FD 18 SRP 2014 dated: 01-10-2014.

**GOVERNMENT ORDER NO. FD 12 SRP 2015, BENGALURU, DATED 8TH MAY 2015**

Government are pleased to sanction increase in the rates of Dearness Allowance to Teaching Staff who are on UGC/AICTE/ICAR scales of pay and to Judicial Officers on NJPC pay scales from the existing 107% to 113% of the basic pay with effect from **1st January 2015.**

2. For the purpose of this order, the term 'Besic Pay' means, the pay drawn by a Govrnment employee in the UGC/AICTE/ICAR and NJPC scales of pay applicable to the post held by him.

3. Basic Pay shall not include any other emoluments.

4. Government are also pleased to sanction increase in the rates of Dearness Allowance to NJPC Pensioners/Family Pensioners from the existing 107% to 113% of the basic pension/family pension with effect from 1st January 2015.

5. The increase in Dearness Allowance admissible under this order is payable in cash until further orders.

6. The payment on account of Dearness Allowance involving fractions of 50 paise and above shall be rounded off to the next rupee and fractions less than 50 paise shall be ignored.

7. The Dearness Allowance will be shown as a distinct element of remuneration and will not be treated as pay for any purpose.

BY ORDER AND IN THE NAME OF THE GOVERNOR OF KARNATAKA
**K.S.RAJALAKSHMI**
Under Secretary to Government
Finance Department (Services-2)

## ಆರ್ಥಿಕ ಸಚಿವಾಲಯ

**ವಿಷಯ :** ಯುಜಿಸಿ/ಐಸಿಎಆರ್/ಎಐಸಿಟಿಇ ವೇತನ ಶ್ರೇಣಿಗಳಲ್ಲಿ ವೇತನ ಪಡೆಯುತ್ತಿರುವ ಬೋಧಕ ವರ್ಗದವರಿಗೆ ಮತ್ತು ಎನ್‌ಜೆಪಿಸಿ ವೇತನ ಶ್ರೇಣಿಯಲ್ಲಿರುವ ನ್ಯಾಯಾಂಗ ಅಧಿಕಾರಿಗಳಿಗೆ/ನಿವೃತ್ತಿ ವೇತನದಾರರಿಗೆ ತುಟ್ಟಿ ಭತ್ಯೆಯನ್ನು ಮಂಜೂರು ಮಾಡುವ ಕುರಿತು.

ಓದಲಾಗಿದೆ:
(1) ಸ.ಆ. ಸಂಖ್ಯೆ: ಎಫ್‌ಡಿ 10 ಎಸ್‌ಆರ್‌ಪಿ 2013 ದಿನಾಂಕ: 20-05-2013.
(2) ಸ.ಆ. ಸಂಖ್ಯೆ: ಎಫ್‌ಡಿ 12 ಎಸ್‌ಆರ್‌ಪಿ 2013 (II) ದಿನಾಂಕ: 12-06-2013.
(3) ಸ.ಆ. ಸಂಖ್ಯೆ: ಎಫ್‌ಡಿ 22 ಎಸ್‌ಆರ್‌ಪಿ 2013 ದಿನಾಂಕ: 10-10-2013.
(4) ಸ.ಆ. ಸಂಖ್ಯೆ: ಎಫ್‌ಡಿ 07 ಎಸ್‌ಆರ್‌ಪಿ 2014 ದಿನಾಂಕ: 11-04-2014.
(5) ಸ.ಆ. ಸಂಖ್ಯೆ: ಎಫ್‌ಡಿ 18 ಎಸ್‌ಆರ್‌ಪಿ 2014 ದಿನಾಂಕ: 01-10-2014.

**ಸರ್ಕಾರಿ ಆದೇಶ ಸಂಖ್ಯೆ: ಆಇ 12 ಎಸ್‌ಆರ್‌ಪಿ 2015, ಬೆಂಗಳೂರು, ದಿನಾಂಕ: 8ನೇ ಮೇ 2015**

ಯುಜಿಸಿ/ಎಐಸಿಟಿಇ/ಐಸಿಎಆರ್ ವೇತನ ಶ್ರೇಣಿಗಳಲ್ಲಿರುವ ಬೋಧಕ ಸಿಬ್ಬಂದಿಗಳಿಗೆ ಮತ್ತು ಎನ್‌ಜೆಪಿಸಿ ವೇತನ ಶ್ರೇಣಿಯಲ್ಲಿರುವ ನ್ಯಾಯಾಂಗ ಅಧಿಕಾರಿಗಳಿಗೆ ಹಾಲಿ ಲಭ್ಯವಿರುವ ತುಟ್ಟಿಭತ್ಯೆಯ ದರವನ್ನು ಮೂಲ ವೇತನದ ಶೇ.107 ರಿಂದ **ಶೇ.113 ಕ್ಕೆ ಹೆಚ್ಚಿಸಿ ದಿನಾಂಕ 1ನೇ ಜನವರಿ 2015** ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಲು ಸರ್ಕಾರವು ಹರ್ಷಿಸುತ್ತದೆ.

2. ಈ ಆದೇಶದ ಉದ್ದೇಶಗಳಿಗಾಗಿ **'ಮೂಲ ವೇತನ'** ಎಂದರೆ ಸರ್ಕಾರಿ ನೌಕರನು ಧಾರಣ ಮಾಡಿರುವ ಹುದ್ದೆಗೆ ಅನ್ವಯವಾಗುವ ಯುಜಿಸಿ/ಐಸಿಎಆರ್/ಎಐಸಿಟಿಇ ಮತ್ತು ಎನ್‌ಜೆಪಿಸಿ ವೇತನ ಶ್ರೇಣಿಗಳಲ್ಲಿ ಪಡೆಯುವ ವೇತನ.

3. ಮೂಲ ವೇತನಕ್ಕೆ ಇನ್ನಾವುದೇ ಉಪಲಬ್ದಗಳನ್ನು ಸೇರಿಸತಕ್ಕದ್ದಲ್ಲ.

4. ಎನ್‌ಜೆಪಿಸಿ ನಿವೃತ್ತಿ ವೇತನದಾರರು/ಕುಟುಂಬ ನಿವೃತ್ತಿ ವೇತನದಾರರಿಗೆ ಹಾಲಿ ಲಭ್ಯವಿರುವ ತುಟ್ಟಿಭತ್ಯೆಯ ದರವನ್ನು ಮೂಲ ನಿವೃತ್ತಿ ವೇತನ/ಕುಟುಂಬ ನಿವೃತ್ತಿ ವೇತನದ **ಶೇ.107 ರಿಂದ ಶೇ.113**ಕ್ಕೆ ಹೆಚ್ಚಿಸಿ ದಿನಾಂಕ **1**ನೇ ಜನವರಿ **2015** ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಲು ಸಹ ಸರ್ಕಾರವು ಹರ್ಷಿಸುತ್ತದೆ.

5. ಈ ಆದೇಶದ ಮೇರೆಗೆ ಮಂಜೂರಾಗಿರುವ ತುಟ್ಟಿ ಭತ್ಯೆಯನ್ನು ಮುಂದಿನ ಆದೇಶ ಹೊರಡಿಸುವವರೆಗೆ ನಗದಾಗಿ ಪಾವತಿ ಮಾಡಲಾಗುವುದು.

6. ತುಟ್ಟಿ ಭತ್ಯೆಯ ಕಾರಣದಿಂದ ಸಂದಾಯ ಮಾಡಬೇಕಾಗಿರುವ ಐವತ್ತು ಪೈಸೆ ಹಾಗೂ ಅದಕ್ಕಿಂತ ಹೆಚ್ಚಿನ ಭಿನ್ನಾಂಕಗಳನ್ನು ಮುಂದಿನ ರೂಪಾಯಿಗೆ ಪೂರ್ಣಗೊಳಿಸತಕ್ಕದ್ದು ಮತ್ತು ಐವತ್ತು ಪೈಸೆಗಿಂತ ಕಡಿಮೆ ಇರುವ ಭಿನ್ನಾಂಕಗಳನ್ನು ಕಡೆಗಣಿಸತಕ್ಕದ್ದು.

7. ತುಟ್ಟಿ ಭತ್ಯೆಯನ್ನು ಸಂಭಾವನೆಯ ವಿಶಿಷ್ಟ ಅಂಶವಾಗಿ ತೋರಿಸುವುದು ಮತ್ತು ಯಾವುದೇ ಉದ್ದೇಶಕ್ಕಾಗಿ ಇದನ್ನು ವೇತನ ಎಂದು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಸ್.ರಾಜಲಕ್ಷ್ಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸೇವೆಗಳು-2)

**PR-291**
**SC-100**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಆಕುಕ 111 ಆರ್‌ಜಿಯು 2015 ಬೆಂಗಳೂರು, ದಿನಾಂಕ: 22-04-2015.**

ಸರ್ಕಾರದ ಆದೇಶ ಸಂಖ್ಯೆ: ಆಕುಕ 111 ಆರ್‌ಜಿಯು 2015, ದಿ: 01-04-2015 ರಲ್ಲಿ ರಾಜ್ಯದಲ್ಲಿನ ಖಾಸಗಿ ವೈದ್ಯಕೀಯ ಮತ್ತು ದಂತ ವೈದ್ಯಕೀಯ ಸ್ನಾತಕ ಹಾಗೂ ಸ್ನಾತಕೋತ್ತರ ಕೋರ್ಸುಗಳ ಸೀಟುಗಳ ಪ್ರವೇಶ ಶುಲ್ಕವನ್ನು 2015-16 ನೇ ಸಾಲಿಗೆ ಪರಿಷ್ಕರಿಸಿ ಹೊರಡಿಸಲಾಗಿತ್ತು.

ಆದರೆ ಸ್ನಾತಕ ಕೋರ್ಸುಗಳಾದ ಎಂಬಿಬಿಎಸ್ ಮತ್ತು ಬಿಡಿಎಸ್ ಕೋರ್ಸುಗಳ ಪ್ರವೇಶಾತಿಗೆ ಸಂಬಂಧಿಸಿದಂತೆ ಖಾಸಗಿ ಕಾಲೇಜುಗಳ ಒಕ್ಕೂಟಗಳೊಂದಿಗೆ ಯಾವುದೇ ಪರಸ್ಪರ ಒಡಂಬಡಿಕೆಯಾಗಿರದ ಕಾರಣ ಸದರಿ ಆದೇಶ ಭಾಗದಲ್ಲಿನ ಸ್ನಾತಕ ಕೋರ್ಸುಗಳಾದ ಎಂಬಿಬಿಎಸ್ ಮತ್ತು ಬಿಡಿಎಸ್ ಕೋರ್ಸುಗಳ ಪರಿಷ್ಕೃತ ಶುಲ್ಕ ನಿಗದಿಗೆ ಸಂಬಂಧಿಸಿದ ಈ ಕೆಳಕಂಡ ಭಾಗಗಳನ್ನು ಕೈಬಿಟ್ಟು ಓದಿಕೊಳ್ಳತಕ್ಕದ್ದು.

ರಾಜ್ಯದಲ್ಲಿನ ಖಾಸಗಿ ವೈದ್ಯಕೀಯ / ದಂತ ವೈದ್ಯಕೀಯ ಕಾಲೇಜುಗಳಲ್ಲಿನ (ಕಾಮೆಡ್-ಕೆ) ವೈದ್ಯಕೀಯ (MBBS) / ದಂತ ವೈದ್ಯಕೀಯ (BDS) ಸೀಟುಗಳಿಗೆ ಪಾವತಿಸಬೇಕಾದ ಶುಲ್ಕದ ವಿವರ:

(ರೂ.ಗಳಲ್ಲಿ)

| ಸಂಖ್ಯೆ | ಕೋರ್ಸುಗಳ ವಿವರ | ಕಾಮೆಡ್-ಕೆ ಅಭ್ಯರ್ಥಿಗಳಿಗೆ | | ಸಿಇಟಿ ಮೂಲಕ ಸರ್ಕಾರಿ ಕೋಟಾದಡಿ ಆಯ್ಕೆಯಾದ ಅಭ್ಯರ್ಥಿಗಳಿಗೆ | |
|---|---|---|---|---|---|
| | | ಪ್ರಸ್ತುತ ನಿಗದಿಪಡಿಸಿರುವ ಶುಲ್ಕ | ಪರಿಷ್ಕೃತ ಶುಲ್ಕ | ಪ್ರಸ್ತುತ ನಿಗದಿಪಡಿಸಿರುವ ಶುಲ್ಕ | ಪರಿಷ್ಕೃತ ಶುಲ್ಕ |
| ಅ) | ಎಂಬಿಬಿಎಸ್ | 3,57,500 | 4,25,000 | 38,500 | 55,000 |
| ಆ) | ಬಿಡಿಎಸ್ | 2,53,000 | 2,75,000 | 27,500 | 35,000 |

ಕರ್ನಾಟಕ ಧಾರ್ಮಿಕ ಮತ್ತು ಭಾಷಾ ಅಲ್ಪಸಂಖ್ಯಾತ ವೃತ್ತಿಪರ ಕಾಲೇಜುಗಳ ಒಕ್ಕೂಟದ (KRLMPCA) ಲ್ಲಿನ ಖಾಸಗಿ ವೈದ್ಯಕೀಯ / ದಂತ ವೈದ್ಯಕೀಯ ಕಾಲೇಜುಗಳಲ್ಲಿನ ವೈದ್ಯಕೀಯ (MBBS) / ದಂತ ವೈದ್ಯಕೀಯ (BDS) ಸೀಟುಗಳಿಗೆ ಪಾವತಿಸಬೇಕಾದ ಶುಲ್ಕದ ವಿವರ:

(ರೂ.ಗಳಲ್ಲಿ)

| ಸಂಖ್ಯೆ | ಕೋರ್ಸುಗಳ ವಿವರ | KRLMPCA ಅಭ್ಯರ್ಥಿಗಳಿಗೆ | | ಸಿಇಟಿ ಮೂಲಕ ಸರ್ಕಾರಿ ಕೋಟಾದಡಿ ಆಯ್ಕೆಯಾದ ಅಭ್ಯರ್ಥಿಗಳಿಗೆ | |
|---|---|---|---|---|---|
| | | ಪ್ರಸ್ತುತ ನಿಗದಿಪಡಿಸಿರುವ ಶುಲ್ಕ | ಪರಿಷ್ಕೃತ ಶುಲ್ಕ | ಪ್ರಸ್ತುತ ನಿಗದಿಪಡಿಸಿರುವ ಶುಲ್ಕ | ಪರಿಷ್ಕೃತ ಶುಲ್ಕ |
| ಅ) | ಎಂಬಿಬಿಎಸ್ | 3,57,500 | 4,25,000 | 38,500 | 55,000 |
| ಆ) | ಬಿಡಿಎಸ್ | 2,53,000 | 2,75,000 | 27,500 | 35,000 |

ಉಳಿದಂತೆ ಸದರಿ ಆದೇಶ ಭಾಗದಲ್ಲಿನ ಇತರೆ ಅಂಶಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಕೆ. ನಾಗವೇಣಿ**
ಸರ್ಕಾರದ ಅಧೀನ ಕಾರ್ಯದರ್ಶಿ–2
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,
(ವೈದ್ಯಕೀಯ ಶಿಕ್ಷಣ)

PR-292
SC-100

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** 2015–16ನೇ ಸಾಲಿಗೆ ಸ್ನಾತಕೋತ್ತರ ದಂತ ವೈದ್ಯಕೀಯ ಡಿಗ್ರಿ / ಡಿಪ್ಲೊಮಾ ಕೋರ್ಸುಗಳ 2ನೇ ಸುತ್ತಿನ ಸೀಟು ಹಂಚಿಕೆ ನಂತರ ಬಾಕಿ ಉಳಿದ ಸೀಟುಗಳಿಗೆ ಪ್ರವೇಶ ಪರೀಕ್ಷೆ ನಡೆಸುವ ಬಗ್ಗೆ.

**ಓದಲಾಗಿದೆ:** ದಿ: 10–04–2015 ರಂದು ಪ್ರಧಾನ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಓದಲಾದ ನಡವಳಿಗಳಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ: 13366–13457/2015ರಲ್ಲಿ ನೀಡಿರುವ ನಿರ್ದೇಶನದನ್ವಯ ಪಿಜಿಇಟಿ ಸಮಿತಿಯು 2015–16 ನೇ ಸಾಲಿನ ಸ್ನಾತಕೋತ್ತರ ದಂತ ವೈದ್ಯಕೀಯ ಡಿಗ್ರಿ/ಡಿಪ್ಲೊಮಾ ಕೋರ್ಸುಗಳಲ್ಲಿ ಎಐಐಎಂಎಸ್ ನಡೆಸಿದ ಅಖಿಲ ಭಾರತ ಪ್ರವೇಶ ಪರೀಕ್ಷೆಯಲ್ಲಿ ಅರ್ಹರಾದ ಅಭ್ಯರ್ಥಿಗಳಿಗೆ ಹಂಚಿಕೆ ಮಾಡುವ ಸಲುವಾಗಿ ನಡೆಸಿದ 2ನೇ ಸುತ್ತಿನ ಸೀಟು ಹಂಚಿಕೆ ನಂತರ ಬಾಕಿ ಉಳಿದ ಸೀಟುಗಳಿಗೆ ಸ್ನಾತಕೋತ್ತರ ಪ್ರವೇಶ ಪರೀಕ್ಷೆಯನ್ನು ನಡೆಸಲು ಕರ್ನಾಟಕ ಪರೀಕ್ಷಾ ಪ್ರಾಧಿಕಾರಕ್ಕೆ ನಿರ್ದೇಶನ ನೀಡಲಾಗಿರುತ್ತದೆ. ಅದರಂತೆ ಸರ್ಕಾರಿ ಆದೇಶವನ್ನು ಹೊರಡಿಸಲು ಕಾರ್ಯಕಾರಿ ನಿರ್ದೇಶಕರು, ಕರ್ನಾಟಕ ಪರೀಕ್ಷಾ ಪ್ರಾಧಿಕಾರ ಇವರು ಸರ್ಕಾರವನ್ನು ಕೋರಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ 2015–16 ನೇ ಸಾಲಿನ ಸ್ನಾತಕೋತ್ತರ ದಂತ ವೈದ್ಯಕೀಯ ಡಿಗ್ರಿ/ಡಿಪ್ಲೊಮಾ ಕೋರ್ಸುಗಳಿಗೆ ಸಂಬಂಧಿಸಿದಂತೆ ನಡೆದ 2ನೇ ಸುತ್ತಿನ ಸೀಟು ಹಂಚಿಕೆ ನಂತರ ಬಾಕಿ ಉಳಿದ ಸೀಟುಗಳಿಗೆ ಸ್ನಾತಕೋತ್ತರ ಪ್ರವೇಶ ಪರೀಕ್ಷೆಯನ್ನು ಕರ್ನಾಟಕ ಪರೀಕ್ಷಾ ಪ್ರಾಧಿಕಾರದಿಂದ ನಡೆಸಲು ಸರ್ಕಾರವು ತೀರ್ಮಾನಿಸಿ, ಈ ಕೆಳಗಿನಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 160 ಆರ್‌ಜಿಯು 2015, ಬೆಂಗಳೂರು, ದಿನಾಂಕ: 28–04–2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2015–16 ನೇ ಸಾಲಿನ ಸ್ನಾತಕೋತ್ತರ ದಂತ ವೈದ್ಯಕೀಯ ಡಿಗ್ರಿ/ಡಿಪ್ಲೊಮಾ ಕೋರ್ಸುಗಳ 2ನೇ ಸುತ್ತಿನ ಸೀಟು ಹಂಚಿಕೆ ನಂತರ ಬಾಕಿ ಉಳಿಯುವ ಸೀಟುಗಳಿಗೆ ಸ್ನಾತಕೋತ್ತರ ಪ್ರವೇಶ ಪರೀಕ್ಷೆಯನ್ನು ನಡೆಸುವ ಜವಾಬ್ದಾರಿಯನ್ನು ಕರ್ನಾಟಕ ಪರೀಕ್ಷಾ ಪ್ರಾಧಿಕಾರಕ್ಕೆ ವಹಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಕೆ. ನಾಗವೇಣಿ**
ಸರ್ಕಾರದ ಅಧೀನ ಕಾರ್ಯದರ್ಶಿ–2
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,
(ವೈದ್ಯಕೀಯ ಶಿಕ್ಷಣ)

PR-294

## ಕಂದಾಯ ಸಚಿವಾಲಯ

**ವಿಷಯ :** ಕರ್ನಾಟಕ ಭೂ ಕಬಳಿಕೆ ನಿಷೇಧ ಅಧಿನಿಯಮ–2001 ಜಾರಿಗೆ ಬಂದಿರುವ ಹಿನ್ನೆಲೆಯಲ್ಲಿ ವಿಶೇಷ ನ್ಯಾಯಾಲಯದಲ್ಲಿ ಸ್ಥಾಪಿಸುವ ಬಗ್ಗೆ.

**ಓದಲಾಗಿದೆ:** ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 22 ಶಾಸನ 2007 ದಿನಾಂಕ: 20–10–2014

**ಪ್ರಸ್ತಾವನೆ:**

ಸರ್ಕಾರಕ್ಕೆ ವಕ್ಫ್ ಅಥವಾ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮದಾಯ ದತ್ತಿಗಳಿಗೆ, ಸ್ಥಳೀಯ ಸಂಸ್ಥೆಗಳಿಗೆ ಅಥವಾ ಸರ್ಕಾರದ ಒಡೆತನದಲ್ಲಿರುವ ಅಥವಾ ನಿಯಂತ್ರಣದಲ್ಲಿರುವ ಅಥವಾ ವ್ಯವಸ್ಥಾಪನೆಯಲ್ಲಿರುವ ಶಾಸನಬದ್ಧ ಅಥವಾ ಶಾಸನಬದ್ಧವಲ್ಲದ ಸಂಸ್ಥೆಗಳಿಗೆ ಸೇರಿದ, ಭೂಮಿಗಳನ್ನು ಕಬಳಿಸಲು ಮಾಡಲಾಗುವ ಸಂಘಟಿತ ಪ್ರಯತ್ನಗಳನ್ನು ಮತ್ತು ಈ ದಿಸೆಯಲ್ಲಿ ಭೂ ಕಬಳಿಕೆ ಕಾನೂನು ಬಾಹಿರವಾದ ಚಟುವಟಿಕೆಗಳನ್ನು ತಡೆಗಟ್ಟಲು ಮೇಲೆ ಓದಲಾದ ದಿನಾಂಕ: 20–10–2014ರ ಅಧಿಸೂಚನೆಯನ್ವಯ ಕರ್ನಾಟಕ ಭೂ ಕಬಳಿಕೆ ನಿಷೇಧ ಅಧಿನಿಯಮ 2011 ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಲಾದ ದಿನಾಂಕ: 20–10–2014ರಿಂದ ಜಾರಿಗೆ ಬಂದಿರುತ್ತದೆ. ಸದರಿ ಅಧಿನಿಯಮವು ಜಾರಿಗೆ ಬಂದ ಪರಿಣಾಮವಾಗಿ ವಿಶೇಷ ನ್ಯಾಯಾಲಯಗಳ ರಚನೆ ಅಗತ್ಯವಿರುತ್ತದೆ. ಈ ದಿಸೆಯಲ್ಲಿ ಎಷ್ಟು ಸಂಖ್ಯೆಯ ವಿಶೇಷ ನ್ಯಾಯಾಲಯಗಳನ್ನು ಮುಖ್ಯವಾಗಿ ಎಲ್ಲೆಲ್ಲಿ ರಚನೆ ಮಾಡಬೇಕು ಅದಕ್ಕೆ ಏನು ಕ್ಷೇತ್ರಾಧಿಕಾರ/ಅಧಿಕಾರ ವ್ಯಾಪ್ತಿ ನಿಗದಿಪಡಿಸಬೇಕು ಎನ್ನುವ ಬಗ್ಗೆ ಮತ್ತು ಈ ವಿಷಯವಾಗಿ ಇನ್ನಿತರೇ ಅಂಶಗಳ ಬಗ್ಗೆ ಅಧ್ಯಯನ ಮಾಡಿ ವರದಿಯೊಂದನ್ನು ಸಲ್ಲಿಸಲು ಈ ಕೆಳಕಂಡ ಅಧಿಕಾರಿಗಳ ನೇತೃತ್ವದಲ್ಲಿ ಒಂದು ಸಮಿತಿಯನ್ನು ರಚಿಸಲು ಸರ್ಕಾರವು ನಿರ್ಧರಿಸಿರುತ್ತದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಕಂಇ 351 ಎಲ್‌ಜಿಪಿ 2014 ದಿನಾಂಕ: 24–04–2015**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಭೂ ಕಬಳಿಕೆ ನಿಷೇಧ ಅಧಿನಿಯಮ, 2011 ಜಾರಿಗೆ ಬಂದ ಪರಿಣಾಮವಾಗಿ ಸದರಿ ಅಧಿನಿಯಮದ ಅನ್ವಯ ವಿಶೇಷ ನ್ಯಾಯಾಲಯಗಳನ್ನು ಸ್ಥಾಪಿಸುವ ಅಗತ್ಯವಿದ್ದು ಈ ಸಂಬಂಧ ಮುಖ್ಯವಾಗಿ ಎಲ್ಲಿ ವಿಶೇಷ ನ್ಯಾಯಾಲಯಗಳನ್ನು ರಚನೆ ಮಾಡಬೇಕು ಮತ್ತು ಅದಕ್ಕೆ ಏನು ಕ್ಷೇತ್ರಾಧಿಕಾರ ನಿಗಧಿಪಡಿಸಬೇಕು ಹಾಗೂ ಇದಕ್ಕೆ ಸಂಬಂಧಿಸಿದಂತೆ ಮತ್ತಿತರ ವಿಷಯಗಳನ್ನು/ಅಂಶಗಳನ್ನು ಅಧ್ಯಯನ ಮಾಡಿ ವರದಿಯೊಂದನ್ನು ಸರ್ಕಾರಕ್ಕೆ ಸಲ್ಲಿಸಲು ಈ ಕೆಳಕಂಡ ಅಧಿಕಾರಿಗಳ ನೇತೃತ್ವದಲ್ಲಿ ಸಮಿತಿಯನ್ನು ರಚಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಹುದ್ದೆ ಮತ್ತು ಇಲಾಖೆ | ನೇಮಿಸಲಾದ ಹುದ್ದೆ |
|---|---|---|
| 1 | ಸರ್ಕಾರದ ಕಾರ್ಯದರ್ಶಿ, ಕಂದಾಯ ಇಲಾಖೆ | ಅಧ್ಯಕ್ಷರು |
| 2 | ಸರ್ಕಾರದ ಅಪರ ಕಾರ್ಯದರ್ಶಿ–2, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ. | ಸದಸ್ಯರು |
| 3 | ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು. | ಸದಸ್ಯರು |
| 4 | ಆಯುಕ್ತರು, ಭೂಮಾಪನ ಮತ್ತು ಭೂ ದಾಖಲೆಗಳ ಇಲಾಖೆ, ಬೆಂಗಳೂರು. | ಸದಸ್ಯರು |
| 5 | ಜಿಲ್ಲಾಧಿಕಾರಿ, ಬೆಂಗಳೂರು ನಗರ ಜಿಲ್ಲೆ | ಸದಸ್ಯರು |
| 6 | ಜಿಲ್ಲಾಧಿಕಾರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ. | ಸದಸ್ಯರು |
| 7 | ಸರ್ಕಾರದ ಜಂಟಿ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ. | ಸದಸ್ಯರು |
| 8 | ವಿಶೇಷ ಜಿಲ್ಲಾಧಿಕಾರಿ–1 ಬೆಂಗಳೂರು ಉತ್ತರ ವಿಭಾಗ, ಬೆಂಗಳೂರು. | ಸದಸ್ಯರು |
| 9 | ವಿಶೇಷ ಜಿಲ್ಲಾಧಿಕಾರಿ–2, ಬೆಂಗಳೂರು ದಕ್ಷಿಣ ಉಪ ವಿಭಾಗ, ಬೆಂಗಳೂರು. | ಸದಸ್ಯರು |
| 10 | ಸರ್ಕಾರದ ಉಪ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ. | ಸದಸ್ಯರು |

| | | |
|---|---|---|
| 11 | ಸರ್ಕಾರದ ಉಪ ಕಾರ್ಯದರ್ಶಿ,<br>ಕಂದಾಯ ಇಲಾಖೆ<br>[ಭೂ ಮಂಜೂರಾತಿ] | ಸದಸ್ಯ ಕಾರ್ಯದರ್ಶಿ |

ಸದರಿ ಸಮಿತಿಯು ಆದಷ್ಟು ಬೇಗನೆ ಈ ಬಗ್ಗೆ ಅಧ್ಯಯನ ಮಾಡಿ ಒಂದು ತಿಂಗಳ ಅವಧಿಯಲ್ಲಿ ಯುಕ್ತ ವರದಿಯನ್ನು ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಉಮಾದೇವಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ,

(ಭೂಮಂಜೂರಾತಿ–1).

**PR-295**

**SC-50**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ವಿವಿಧ ವರ್ಗಗಳ ಮಾರಾಟಗಾರರ ನಮೂದಿತ ಪಟ್ಟಿಯ ಕುರಿತು.

**ಓದಲಾಗಿದೆ:** ದಿನಾಂಕ: 05–01–2015ರ ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 63 ಇಆಇ 2013.

**ಪ್ರಸ್ತಾವನೆ:**

ರಾಜ್ಯದಲ್ಲಿರುವ ವಿವಿಧ ಸರ್ಕಾರಿ ಕಛೇರಿಗಳ ಗಣಕೀಕರಣಕ್ಕಾಗಿ ಅವಶ್ಯವಿರುವ ಗಣಕ ಯಂತ್ರಗಳು, ಪ್ರಿಂಟರ್‌ಗಳು, ಅವುಗಳ ಪೂರಕ ಸಾಧನಗಳು, ವಿವಿಧ ತಂತ್ರಾಂಶಗಳು, ತಂತ್ರಾಂಶ ಸಿದ್ದಪಡಿಸುವ, ನೆಟ್ ವರ್ಕಿಂಗ್, ಯು.ಪಿ.ಎಸ್., ತರಬೇತಿ, ವೆಬ್ ಡಿಸೈನಿಂಗ್, ಡೇಟಾ ಎಂಟ್ರಿ, ಹಾಗೂ ವಾರ್ಷಿಕ ನಿರ್ವಹಣೆ ಮುಂತಾದ ಸಾಮಗ್ರಿ/ಸೇವೆಗಳನ್ನು ಪೂರೈಸುವ ಇತ್ಯಾದಿಗಾಗಿ ನಾನಾ ಸಂಸ್ಥೆಗಳನ್ನು ಸಂಕ್ಷಿಪ್ತಗೊಳಿಸಿ, ಮಾರಾಟಗಾರರ ಪಟ್ಟಿಗೆ ಮೇಲೆ ಓದಲಾದ ಸರ್ಕಾರದ ಆದೇಶದ ಮೂಲಕ ಅನುಮೋದನೆ ನೀಡಲಾಗಿದೆ. ಸದರಿ ಪಟ್ಟಿಯಲ್ಲಿರುವ ಸಂಸ್ಥೆಗಳ ಸಿಂಧುತ್ವವು 31–03–2015ಗೆ ಕೊನೆಗೊಳ್ಳಲಿದೆ. 2015–16ನೇ ಸಾಲಿಗೆ ಹೊಸ ಪಟ್ಟಿ ಸಿದ್ದಪಡಿಸುವ ಪ್ರಕ್ರಿಯೆ ಪ್ರಾರಂಭವಾಗಿದ್ದು, ಇನ್ನೂ ಅಂತಿಮವಾಗಿಲ್ಲವಾದ್ದರಿಂದ ಸದರಿ ಆದೇಶದನ್ವಯ ಪ್ರಸ್ತುತ ಚಾಲ್ತಿಯಲ್ಲಿರುವ ಮಾರಾಟಗಾರರ ಪಟ್ಟಿಯ ಸಿಂಧುತ್ವವನ್ನು ವಿಸ್ತರಿಸುವುದು ಅವಶ್ಯವಾಗಿದೆ. ಅದರಂತೆ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 99 ಇಆಇ 2014, ಬೆಂಗಳೂರು ದಿನಾಂಕ 30ನೇ ಏಪ್ರಿಲ್ 2015**

2. ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ, ರಾಜ್ಯದಲ್ಲಿರುವ ವಿವಿಧ ಸರ್ಕಾರಿ ಕಛೇರಿಗಳಲ್ಲಿ ಗಣಕೀಕರಣಕ್ಕಾಗಿ ಅವಶ್ಯವಿರುವ ಗಣಕ ಯಂತ್ರಗಳು, ಪ್ರಿಂಟರ್‌ಗಳು, ಅವುಗಳ ಪೂರಕ ಸಾಧನಗಳು, ವಿವಿಧ ತಂತ್ರಾಂಶಗಳು, ತಂತ್ರಾಂಶ ಸಿದ್ದಪಡಿಸುವ, ನೆಟ್ ವರ್ಕಿಂಗ್, ಯು.ಪಿ.ಎಸ್., ತರಬೇತಿ, ವೆಬ್ ಡಿಸೈನಿಂಗ್, ಡೇಟಾ ಎಂಟ್ರಿ, ಹಾಗೂ ವಾರ್ಷಿಕ ನಿರ್ವಹಣೆ ಮುಂತಾದ ಸಾಮಗ್ರಿ/ಸೇವೆಗಳನ್ನು ಪೂರೈಸುವ ಇತ್ಯಾದಿಗಾಗಿ ಮೇಲೆ ಓದಲಾದ ಸರ್ಕಾರದ ಆದೇಶದಲ್ಲಿನ ಸಂಸ್ಥೆಗಳ ಸಿಂಧುತ್ವವನ್ನು ದಿನಾಂಕ: 01–04–2015 ರಿಂದ ದಿನಾಂಕ: 30–06–2015ರವರೆಗೆ ಅಥವಾ ಹೊಸ ಪಟ್ಟಿ ಸಿದ್ದಗೊಳ್ಳುವವರೆಗೆ, ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವೈ.ಸುಶೀಲ**

ಪೀಠಾಧಿಕಾರಿ–2,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ,

(ಇ–ಆಡಳಿತ).

**PR-296**

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ :** "ಪ್ರಾಚ್ಯವಸ್ತು (Archaeological) ಸಂಗ್ರಹಾಲಯಗಳು ಮತ್ತು ಪರಂಪರೆ" ಇಲಾಖೆಯ ಹೆಸರನ್ನು "ಪುರಾತತ್ವ, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ" ಎಂದು ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಮೈಸೂರು ರವರ ಪತ್ರ ಸಂಖ್ಯೆ:ಅಪ್ರಾಸಂಪ:ಟಿಆರ್‌ಟಿ30:2014–15, ದಿನಾಂಕ: 22–08–2014.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 22–08–2014ರ ಪತ್ರದಲ್ಲಿ ಆಯುಕ್ತರು, ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಮೈಸೂರು ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಹಾಲಿ ಇಲಾಖೆಯು ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ಎಂದು ಹೆಸರು ಪಡೆದಿರುತ್ತದೆ. ಸಾಮಾನ್ಯವಾಗಿ ಕೇಂದ್ರ ಸರ್ಕಾರದ ಸಂಸ್ಕೃತಿ ಮಂತ್ರಾಲಯದ ಆಡಳಿತಕ್ಕೆ ಒಳಪಟ್ಟಿರುವ ಭಾರತೀಯ ಪುರಾತತ್ವ ಇಲಾಖೆಯು ಭಾರತೀಯ ಪುರಾತತ್ವ ಸರ್ವೇಕ್ಷಣ ಎಂದು ಹೆಸರು ಪಡೆದಿರುತ್ತದೆ ಮತ್ತು ಪ್ರತಿ ವಲಯದ ಅಲ್ಲಿನ ಇಲಾಖಾ ಮುಖ್ಯಸ್ಥರು ಅಧೀಕ್ಷಕ ಪುರಾತತ್ವವಿದರು ಎಂಬ ಪದನಾಮ ಹೊಂದಿರುತ್ತಾರೆ. ಈಗಾಗಿ ಪ್ರಾಚ್ಯವಸ್ತು ಎಂಬ ಪದದ ಬದಲಾಗಿ ಪುರಾತತ್ವ ಎಂಬ ಪದವನ್ನು ಬಳಸಬಹುದಾಗಿರುತ್ತದೆ. Archaeological ಎಂದರೆ

ಕನ್ನಡದಲ್ಲಿ ಪುರಾತತ್ವ ಎಂಬ ಅರ್ಥವಿದೆ. ಸಾರ್ವಜನಿಕರು, ಸಂಶೋಧಕರು ಹಾಗೂ ಇತಿಹಾಸಕಾರರಿಗೂ ಪುರಾತತ್ವ ಎಂಬ ಪದದ ಬಳಕೆಯು ಸರಾಗ ಮತ್ತು ಸುಲಭವಾಗಿರುತ್ತದೆ. ಈ ಹಿನ್ನೆಲೆಯಲ್ಲಿ, ಇನ್ನು ಮುಂದೆ ಈ ಇಲಾಖೆಯ ಹೆಸರನ್ನು ಪರಿಷ್ಕರಿಸಬಹುದಾಗಿರುತ್ತದೆ. ಆದ್ದರಿಂದ ಇನ್ನು ಮುಂದೆ ಪ್ರಾಚ್ಯವಸ್ತು (Archaeological) ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ" ಎಂಬ ಪದದ ಬದಲಾಗಿ "ಪುರಾತತ್ವ, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ" ಎಂದು ಅಧಿಸೂಚನೆ ಹೊರಡಿಸಲು ಕ್ರಮ ಕೈಗೊಳ್ಳುವಂತೆ ಆಯುಕ್ತರು ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಮೈಸೂರು ರವರು ಸರ್ಕಾರವನ್ನು ಕೋರಿರುತ್ತಾರೆ.

ಆಯುಕ್ತರು, ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ಮೈಸೂರು ರವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಸಂವಾ 234 ಕೆಎಂಯು 2014 ಬೆಂಗಳೂರು, ದಿನಾಂಕ: 13–03–2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕನ್ನಡ ಮತ್ತು ಸಂಸ್ಕೃತಿ ಮತ್ತು ವಾರ್ತಾ ಇಲಾಖೆಯ ವ್ಯಾಪ್ತಿಯಲ್ಲಿನ ಕ್ಷೇತ್ರೀಯ ಇಲಾಖೆಯಾದ "ಪ್ರಾಚ್ಯವಸ್ತು (Archaeological) ಸಂಗ್ರಹಾಲಯಗಳು ಮತ್ತು ಪರಂಪರೆ" ಇಲಾಖೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ "ಪುರಾತತ್ವ, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ" (Archaeological) Museums and Heritage Department) ಎಂದು ಮರು ನಾಮಕರಣ ಮಾಡಿ ಆದೇಶಿಸಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 01 ಟಿಎಫ್‌ಪಿ 1996, ದಿನಾಂಕ: 10–07–1996ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಲಾದ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ. ಅನ್ನಪೂರ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ ಇಲಾಖೆ,
(ಆಡಳಿತ ಕನ್ನಡ)

**PR-298**
**SC-50**

## ಒಳಾಡಳಿತ ಸಚಿವಾಲಯ

**ವಿಷಯ :** ಪೊಲೀಸ್ ಇಲಾಖೆಯಲ್ಲಿ ಪೊಲೀಸ್ ಅಧಿಕಾರಿ/ಸಿಬ್ಬಂದಿಗಳ ವರ್ಗಾವಣೆಯ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 25 ಸೇನೌವ 2015, ದಿನಾಂಕ: 20–04–2015
2. ಡಿಜಿ ಮತ್ತು ಐಜಿಪಿರವರ ಕಛೇರಿಯ ಪತ್ರ ಸಂಖ್ಯೆ:ಸಿಬಿ–4/37/2013–14, ದಿನಾಂಕ: 02–05–2015.

**ಪ್ರಸ್ತಾವನೆ:**

ಮೇಲೆ ಓದಲಾದ (2)ರ ಪತ್ರದಲ್ಲಿ ಪೊಲೀಸ್ ಅಧಿಕಾರಿ/ಸಿಬ್ಬಂದಿಗಳ ವರ್ಗಾವಣೆಗಳನ್ನು ಕರ್ನಾಟಕ ಪೊಲೀಸ್ ಆಕ್ಟ್ 1963ಕ್ಕೆ ಸರ್ಕಾರವು ದಿನಾಂಕ: 09–08–2012 ಮತ್ತು 18–06–2013ರಲ್ಲಿ ನೀಡಿರುವ ಸೂಚನೆಗಳು ಹಾಗೂ ಸರ್ಕಾರವು ವರ್ಗಾವಣೆಗಳಿಗೆ ಸಂಬಂಧಿಸಿದಂತೆ ಹೊರಡಿಸಿರುವ ವರ್ಗಾವಣೆ ಮಾರ್ಗಸೂಚಿಗಳ ಅಡಿಯಲ್ಲಿ ಪರಿಶೀಲಿಸಿ ಹೊರಡಿಸಬೇಕಾಗಿದ್ದು, ಅದರಂತೆ ಪೊಲೀಸ್ ಅಧಿಕಾರಿ/ಸಿಬ್ಬಂದಿಗಳ ವರ್ಗಾವಣೆಗಳನ್ನು ಪೊಲೀಸ್ ಸಿಬ್ಬಂದಿ ಮಂಡಳಿಯಲ್ಲಿ ಪರಿಶೀಲಿಸಲಾಗಿದ್ದು, ಸರ್ಕಾರವು ನಿಗದಿಪಡಿಸಿರುವ ದಿನಾಂಕ: 02–05–2015ರ ಸಾಮಾನ್ಯ ವರ್ಗಾವಣೆಯ ಅವಧಿಯೊಳಗೆ ಪೊಲೀಸ್ ಅಧಿಕಾರಿ/ಸಿಬ್ಬಂದಿಗಳ ವರ್ಗಾವಣೆಗಳನ್ನು ಜಾರಿಗೊಳಿಸಲು ಸಾಧ್ಯವಾಗಿರುವುದಿಲ್ಲ. ಆದ್ದರಿಂದ ಪೊಲೀಸ್ ಇಲಾಖೆಗೆ ಸಂಬಂಧಿಸಿದಂತೆ ಸಾಮಾನ್ಯ ವರ್ಗಾವಣೆಯ ಅವಧಿಯನ್ನು ದಿನಾಂಕ: 09–05–2015ರವರೆಗೆ ವಿಸ್ತರಿಸುವಂತೆ ಡಿಜಿ ಮತ್ತು ಐಜಿಪಿರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಒಇ 125 ಪೊಸಇ 2015 ಬೆಂಗಳೂರು, ದಿನಾಂಕ: 08–05–2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ 2014–15ನೇ ಸಾಲಿನಲ್ಲಿ ಪೊಲೀಸ್ ಇಲಾಖೆಯ ಪೊಲೀಸ್ ಅಧಿಕಾರಿ/ಸಿಬ್ಬಂದಿಗಳ ವರ್ಗಾವಣಾ ಅವಧಿಯನ್ನು ದಿನಾಂಕ: 09–05–2015ರ ವರೆಗೆ ವಿಸ್ತರಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜೆ.ಡಿ. ಮಧುಚಂದ್ರ ತೇಜಸ್ವಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಎ)

**PR-299**
**SC-100**

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



**ನಗರಾಭಿವೃದ್ಧಿ ಸಚಿವಾಲಯ**

**ತಿದ್ದುಪಡಿ ಆದೇಶ**

**ಸಂಖ್ಯೆ: ನಅಇ 91 ಇಎಂಸಿ 2014 (ಭಾಗ) ಬೆಂಗಳೂರು, ದಿನಾಂಕ: 05-05-2015.**

ಸರ್ಕಾರದ ಆದೇಶ ಸಂಖ್ಯೆ: ನಅಇ 91 ಇಎಂಸಿ 2014 ದಿನಾಂಕ: 10-10-2014ರ ಆದೇಶ ಭಾಗದಲ್ಲಿ ವೇತನ ಶ್ರೇಣಿ ರೂ.17650-32000 ಎಂಬಲ್ಲಿ "ಪೌರಸೇವಾ ನೌಕರರನ್ನು ಮುಖ್ಯಾಧಿಕಾರಿ ಶ್ರೇಣಿ-2 ವೃಂದದಲ್ಲಿ ವಿಲೀನಗೊಳಿಸುವುದಕ್ಕೆ ಹಿಂದೆ ಆಯಾಯ ವೃಂದದ ನೌಕರರು ಹೊಂದಿದ್ದ ಹುದ್ದೆಯ ವೇತನ ಶ್ರೇಣಿಯ ಸಂರಕ್ಷಣೆಯೊಂದಿಗೆ ಮುಖ್ಯಾಧಿಕಾರಿ ಶ್ರೇಣಿ-2 ವೃಂದದಲ್ಲಿ ವಿಲೀನಗೊಳಿಸಲಾಗಿದೆ ಮತ್ತು **"ಈ ಅಧಿಕಾರಿಗಳು ಹೊಂದಿದ್ದ ಹಿಂದಿನ ಹುದ್ದೆಯ ವೇತನ ಶ್ರೇಣಿಯು ಮುಖ್ಯಾಧಿಕಾರಿ ಶ್ರೇಣಿ-2 ವೃಂದದ ವೇತನ ಶ್ರೇಣಿಗಿಂತ ಹೆಚ್ಚಿನ ವೇತನ ಶ್ರೇಣಿಯನ್ನು ಹೊಂದಿದಲ್ಲಿ ಆ ವೇತನ ಶ್ರೇಣಿಯಲ್ಲಿಯೇ ಅವರ (ಮುಖ್ಯಾಧಿಕಾರಿ ಶ್ರೇಣಿ-2 ವೃಂದಕ್ಕೆ ವಿಲೀನಗೊಂಡಿರುವ ನೌಕರರ) ವೇತನವನ್ನು ಮುಂದುವರೆಸಲಾಗಿದೆ"** ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿದ್ದಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ

PR-300
SC-200

**ಶಿಕ್ಷಣ ಸಚಿವಾಲಯ**

**ವಿಷಯ:** 2015-16ನೇ ಸಾಲಿನಲ್ಲಿ ವೃತ್ತಿಪರ ಶಿಕ್ಷಣ ಕೋರ್ಸುಗಳ ಪ್ರವೇಶಾತಿಗೆ ಸಂಬಂಧಿಸಿದಂತೆ ರಚಿಸಿರುವ ಶುಲ್ಕ ನಿಯಂತ್ರಣ ಸಮಿತಿಯ ಅಧ್ಯಕ್ಷರು ಹಾಗೂ ಸದಸ್ಯರುಗಳ ಸೇವೆಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಇಡಿ 146 ಟಿಇಸಿ 2014 ದಿನಾಂಕ: 17.12.2014
2) ಜಸ್ಟೀಸ್ ಆರ್.ಗುರುರಾಜನ್, ಅಧ್ಯಕರು, ಶುಲ್ಕ ನಿಯಂತ್ರಣ ಸಮಿತಿ ಇವರ ರಾಜೀನಾಮೆ ಪತ್ರ ದಿನಾಂಕ 15.4.2015
3) ಸರ್ಕಾರದ ಅರೆ ಸರ್ಕಾರಿ ಪತ್ರ ಸಂಖ್ಯೆ: ಇಡಿ 146 ಟಿಇಸಿ 2014 ದಿನಾಂಕ 28.4.2015
4) ಜಸ್ಟೀಸ್ ಆರ್.ಗುರುರಾಜನ್, ಅಧ್ಯಕ್ಷರು, ಶುಲ್ಕ ನಿಯಂತ್ರಣ ಸಮಿತಿ ಇವರ ಪತ್ರ ದಿನಾಂಕ 5.6.2015

**ಪ್ರಸ್ತಾವನೆ:-**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಕರ್ನಾಟಕ ವೃತ್ತಿಪರ ಶಿಕ್ಷಣ ಸಂಸ್ಥೆಗಳು (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗಧಿ) 2006ರ ಅಧಿನಿಯಮದಡಿ ಕಲ್ಪಿಸಲಾಗಿರುವ ಅವಕಾಶಗಳಂತೆ 2015-16ನೇ ಸಾಲಿಗೆ ವೃತ್ತಿಪರ ಶಿಕ್ಷಣ ಕೋರ್ಸುಗಳ ಪ್ರವೇಶಾತಿಗೆ ಸಂಬಂಧಿಸಿದಂತೆ ಜಸ್ಟೀಸ್ ಆರ್.ಗುರುರಾಜನ್, ನಿವೃತ್ತ ನ್ಯಾಯಾಧೀಶರು ಇವರ ಅಧ್ಯಕ್ಷತೆಯಲ್ಲಿ ಶುಲ್ಕ ನಿಯಂತ್ರಣ ಸಮಿತಿಯನ್ನು ರಚಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಜಸ್ಟೀಸ್ ಆರ್.ಗುರುರಾಜನ್ ಇವರು ಸರ್ಕಾರಕ್ಕೆ ಪತ್ರ ಬರೆದು ಶುಲ್ಕ ನಿಯಂತ್ರಣ ಸಮಿತಿಯು ದಿನಾಂಕ 6.4.2015ರಂದು ಸರ್ಕಾರಕ್ಕೆ ವರದಿಯನ್ನು ಸಲ್ಲಿಸಿದ್ದು, ಶುಲ್ಕ ನಿಯಂತ್ರಣ ಸಮಿತಿಯ ಅಧ್ಯಕ್ಷರ ಹುದ್ದೆಯಲ್ಲಿ ತಮ್ಮ ವೈಯಕ್ತಿಕ ಕಾರಣಗಳ ಮೇರೆಗೆ ಮುಂದುವರಿಯಲು ಸಾಧ್ಯವಾಗದೇ ಇರುವುದರಿಂದ ತಮ್ಮ ರಾಜೀನಾಮೆಯನ್ನು ಸ್ವೀಕರಿಸುವಂತೆ ಕೋರಿರುತ್ತಾರೆ. ಮುಂದುವರಿದು ಶುಲ್ಕ ನಿಯಂತ್ರಣ ಸಮಿತಿಯ ಇತರೇ ಸದಸ್ಯರುಗಳಾದ ಡಾ: ಎಸ್.ಬಿಸಲಯ್ಯ ಹಾಗೂ ಶ್ರೀ ಕೆ.ವಿ.ರಾಧಾಕೃಷ್ಣ ಇವರುಗಳೂ ಸಹ ತಮ್ಮ ರಾಜೀನಾಮೆಯನ್ನು ಅಂಗೀಕರಿಸುವಂತೆ ಕೋರಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ಅರೆ ಸರ್ಕಾರಿ ಪತ್ರದಲ್ಲಿ ಶುಲ್ಕ ನಿಯಂತ್ರಣ ಸಮಿತಿಯ ಅಧ್ಯಕ್ಷರಾಗಿ ಮುಂದುವರಿಯುವಂತೆ ಹಾಗೂ ಸಮಿತಿಯ ಇತರೇ ಸದಸ್ಯರುಗಳು ಮುಂದುವರಿಯುವಂತೆ ಶುಲ್ಕ ನಿಯಂತ್ರಣ ಸಮಿತಿಯ ಅಧ್ಯಕ್ಷರನ್ನು ಕೋರಲಾಗಿರುತ್ತದೆ.

ಶುಲ್ಕ ನಿಯಂತ್ರಣ ಸಮಿತಿಯ ಅಧ್ಯಕ್ಷರು ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ತಮ್ಮ ರಾಜೀನಾಮೆ ಪತ್ರವನ್ನು ಹಿಂತೆಗೆದುಕೊಳ್ಳುತ್ತಾ, ತಮಗೆ ಈ ಹಿಂದೆ ನೀಡಿರುವ ಸೌಲಭ್ಯಗಳನ್ನು ಒದಗಿಸಲು ಕರ್ನಾಟಕ ಪರೀಕ್ಷಾ ಪ್ರಾಧಿಕಾರಕ್ಕೆ ನಿರ್ದೇಶನ ನೀಡುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ

**ಆದೇಶ ಸಂಖ್ಯೆ: ಇಡಿ 146 ಟಿಇಸಿ 2014 ಬೆಂಗಳೂರು ದಿನಾಂಕ 12.6.2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಯಲ್ಲಿ 2015-16ನೇ ಸಾಲಿನಲ್ಲಿ ವೃತ್ತಿಪರ ಶಿಕ್ಷಣ ಕೋರ್ಸುಗಳ ಪ್ರವೇಶಾತಿಗೆ ಸಂಬಂಧಿಸಿದಂತೆ ರಚಿಸಿರುವ ಶುಲ್ಕ ನಿಯಂತ್ರಣ ಸಮಿತಿಯ ಅಧ್ಯಕ್ಷರನ್ನಾಗಿ ನಿವೃತ್ತ ನ್ಯಾಯಮೂರ್ತಿಗಳಾದ ಶ್ರೀ ಆರ್.ಗುರುರಾಜನ್‌ರವರನ್ನು ಹಾಗೂ ಅಧ್ಯಕ್ಷರಿಂದ ನಾಮನಿರ್ದೇಶಿತಗೊಂಡ ಶ್ರೀ ಕೆ.ವಿ.ರಾಧಾಕೃಷ್ಣ ಮತ್ತು ಡಾ: ಎಸ್.ಬಿಸಲಯ್ಯ ಇವರುಗಳನ್ನು ಸದರಿ ಸಮಿತಿಯ ಸದಸ್ಯರುಗಳನ್ನಾಗಿ ದಿನಾಂಕ 5.6.2015ರಿಂದ ಮುಂದುವರಿಸಿ ಆದೇಶಿಸಿದೆ.

ಮುಂದುವರೆದು, ಶುಲ್ಕ ನಿಯಂತ್ರಣ ಸಮಿತಿಯ ಅಧ್ಯಕ್ಷರಿಗೆ ಈ ಹಿಂದೆ ನೀಡಿರುವ ಸೌಲಭ್ಯಗಳಾದ ಕಛೇರಿ ಸ್ಥಳ, ಸಿಬ್ಬಂದಿಗಳು ಹಾಗೂ ವಾಹನ ಸೌಲಭ್ಯಗಳನ್ನು ಒದಗಿಸುವಂತೆ ಕರ್ನಾಟಕ ಪರೀಕ್ಷಾ ಪ್ರಾಧಿಕಾರಕ್ಕೆ ತಿಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ.ನಾಗಭೂಷಣ್**
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ)

PR. 337
SC. 50

*ಮುದ್ರಕರು ಹಾಗೂ ಪ್ರಕಾಶಕರು:-* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು-59